ಪುರುಷಸೂಕ್ತಪೂರ್ವಕ

ಇಷ್ಟದೇವತಾರ್ಚನಕ್ರಮಃ

# ಶ್ರೀರಾಮಚಂದ್ರ ಪೂಜಾವಿಧಿಃ

(ಮೊದಲನೆಯ ಭಾಗ—ಮೂಲ ಮಾತ್ರ)


ಸಂಗ್ರಾಹಕರು ಮತ್ತು ಲೇಖಕರು

**ಪ್ರೊ॥ ಬಿ. ಭೀಮಸೇನರಾವ್, ಎಂ.ಎಸ್‌ಸಿ.**



1976

ಪ್ರಕಾಶಕರು

**ಶ್ರೀ ಜಿತಬಿಂದು—ಪ್ರಕಾಶನ**

ಗೀತಾ ಕಾಲೋನಿ, ನಂ. ೪, ನಾಲ್ಕನೇ ಬ್ಲಾಕ್

ಜಯನಗರ : : ಬೆಂಗಳೂರು-೫೬೦ ೦೧೧

# ಪುರುಷಸೂಕ್ತಪೂರ್ವಕ ಇಷ್ಟದೇವತಾರ್ಚನಕ್ರಮಃ

# ಶ್ರೀರಾಮಚಂದ್ರ ಪೂಜಾವಿಧಿಃ

( ಮೊದಲನೆಯ ಭಾಗ—ಮೂಲ ಪಾತ್ರ )



ಸಂಗ್ರಾಹಕರು ಮತ್ತು ಲೇಖಕರು

ಪ್ರೊ|| ಬಿ. ಭೀಮಸೇನರಾವ್, ಎಂ.ಎಸ್‌ಸಿ.






ಪ್ರಕಾಶಕರು

ಶ್ರೀ ಜಿತಬಿಂದು–ಪ್ರಕಾಶನ

ಗೀತಾ ಕಾಲೋನಿ, ನಂ. ೪, ನಾಲ್ಕನೇ ಬ್ಲಾಕ್

ಜಯನಗರ : : ಬೆಂಗಳೂರು-೫೬೦ ೦೧೧

# ಶ್ರೀ ಶ್ರೀ ಜಿತಬಿಂದು ಮಹರ್ಷಿಗಳು ಅನುಗ್ರಹಿಸಿದ

# ಆಶೀರ್ವಚನ



ತಜ್ಞರ ಅಭಿಪ್ರಾಯದಂತೆ ನಮ್ಮ ಭಾರತ ಭೂಮಿಯು ಎಷ್ಟು ಪ್ರಾಚೀನವೋ ಅದರಲ್ಲಿನ ಸಂಸ್ಕೃತಿಯೂ ಕೂಡ ಅಷ್ಟೇ ಪ್ರಾಚೀನ. ಏಕೆಂದರೆ ಅತಿ ಪ್ರಾಚೀನವೆನಿಸಿದ ವೇದಗಳಲ್ಲಿ ವಿವರಿಸಿರುವ ಸಂಸ್ಕೃತಿಯು ಭೂಭಾಗದಲ್ಲಿನ ಇತರ ಎಲ್ಲಾ ಸಂಸ್ಕೃತಿಗಳಿಗಿಂತಲೂ ಅತ್ಯುಚ್ಚವೆನಿಸಿರುವುದು ನಿರ್ವಿವಾದದ ಸಂಗತಿ. ಭರತಖಂಡದಲ್ಲಿನ ಜನಗಳಲ್ಲಿ ಇಂತಹ ಅತಿಶ್ರೇಷ್ಠವಾದ ವೈದಿಕ ಸಂಸ್ಕೃತಿಯು ನೆಲೆಸಿದ್ದ ಕಾಲದಲ್ಲಿ ಇತರ ಜನಾಂಗಗಳು ಅನಾಗರಿಕರೆನಿಸಿದ ಕಾಡುಜನಗಳಾಗಿದ್ದರು ಎಂಬುದು ಪಾಶ್ಚಾತ್ಯತಜ್ಞರು ನಿಷ್ಪಕ್ಷಪಾತವಾಗಿ ವಿಮರ್ಶಿಸಿ ನಿರ್ಧರಿಸಿ ತಮ್ಮ ಅಭಿಪ್ರಾಯವನ್ನು ಎತ್ತಿ ಘೋಷಿಸಿರುವುದು ಮಾತ್ರವಲ್ಲದೆ ಇತ್ತೀಚಿನ ಪಾಶ್ಚಾತ್ಯ ಪಂಡಿತರೂ ವೇದಾಂತಿಗಳೂ ಕೂಡ ಈ ಅಭಿಪ್ರಾಯವನ್ನೇ ಪುಷ್ಟೀಕರಿಸಿರುತ್ತಾರೆ. ಗುಣಗ್ರಾಹಿಗಳಾದ ಪಾಶ್ಚಾತ್ಯರು ಭಾರತದ ವೈದಿಕ ಸಂಸ್ಕೃತಿಯನ್ನು ಅನುಕರಿಸಿ ನಾಗರೀಕತೆಯ ಮಟ್ಟದಲ್ಲಿ ಏರುತ್ತ ಬರುತ್ತಿರುವಾಗ ಇಂತಹ ಶ್ರೇಷ್ಠಸಂಸ್ಕೃತಿಗೆ ಜನ್ಮವಿತ್ತ ಭಾರತದ ಜನಾಂಗ ಅಂದರೆ ಅದರ ಪೀಳಿಗೆಗೆ ಸೇರಿ ಭಾರತೀಯರೆನಿಸಿದ ನಮ್ಮಲ್ಲಿ ಈ ವೈದಿಕ ಸಂಸ್ಕೃತಿಯು ಕಳೆಗುಂದುತ್ತ ಬಂದು ಅಳಿದುಹೋಗುತ್ತಿರುವುದು ಶೋಚನೀಯ ಮತ್ತು ನಮ್ಮ ದೌರ್ಭಾಗ್ಯ. ಇದಕ್ಕೆ ಬಲವಾದ ಕಾರಣವೆಂದರೆ ಪರಕೀಯರ ಧಾಳಿ ಮತ್ತು ನಮ್ಮ ದೇಶದ ಮೇಲೆ ಅವರ ಆಕ್ರಮಣ. ಭಾರತೀಯರು ಈ ಪರಕೀಯರ ನಡೆನುಡಿಗಳನ್ನು ಅನುಕರಿಸುತ್ತ ಬಂದಿರುವುದರಿಂದ ನಮ್ಮಲ್ಲಿನ ವೈದಿಕ ಸಂಸ್ಕೃತಿಯು ಮತ್ತಷ್ಟು ಕಳೆಗುಂದಿತಾದರೂ ಅದರ ಪ್ರಭಾವ ಸುಪ್ತವಾಗಿ ಗುಪ್ತವಾಗಿ ನಮ್ಮ ಧಮನಿಗಳಲ್ಲಿ ಹರಿಯುವ ರಕ್ತದಲ್ಲಿ ಇನ್ನೂ ಇದ್ದೇ ಇದೆ. ಅದನ್ನು ಪುನರುಜ್ಜೀವನಗೊಳಿಸಿ, ಬೆಳೆಸಿ, ಬೆಳಗಿಸಿ, ನಮ್ಮ ಹಿಂದಿನ ಮಟ್ಟಕ್ಕೆ ತರುವುದಕ್ಕೆ ಇನ್ನೂ ಸಾಧ್ಯವಿದೆ. ಆ ಸಂಸ್ಕೃತಿಯನ್ನು ಮತ್ತೆ ನಮ್ಮಲ್ಲಿ ಬೆಳೆಸದಿದ್ದರೆ ನಮ್ಮ ಜೀವನವು ವ್ಯರ್ಥ. ಇದು ಈ ಮೇಧಾವಿಗಳಾದ ಇಲ್ಲಿನ ವಿಜ್ಞಾನಿಗಳಲ್ಲಿಯೂ ಆಳರಸರಲ್ಲಿಯೂ

ತಲೆದೋರಿ ಅದರ ಪುನರುದ್ಧಾರಕ್ಕಾಗಿ ಪ್ರಯತ್ನ ನಡೆಯುತ್ತಿರುವುದು ಒಂದು ಶುಭಸೂಚನೆ ಮತ್ತು ಮಹತ್ವದ ಸಂಗತಿ.

ಇಂತಹ ಭವ್ಯವಾದ ಪ್ರಗತಿಯನ್ನು ಸಾಧಿಸಲು ಎಲ್ಲರ ನೆರವೂ ಬೇಕು. ಆ ಹಾದಿಯಲ್ಲಿ ಮಠಾಧಿಪತಿಗಳ, ಸಾಧುಸಂತರ, ಸನ್ಯಾಸಿಗಳ ಮತ್ತು ನಿಃಸ್ವಾರ್ಥಬುದ್ಧಿಯಿಂದ ನಮ್ಮ ಜನಾಂಗದ ಶ್ರೇಯೋಭಿವೃದ್ಧಿಯನ್ನು ಕೋರಿ ತಮ್ಮ ತನುಧನಮನಗಳನ್ನು ಈ ಮಹತ್ಕಾರ್ಯಕ್ಕೇ ಮೀಸಲಾಗಿರಿಸಿ ಜನತೆಯನ್ನು ಪ್ರಗತಿಮಾರ್ಗದಲ್ಲಿ ಒಯ್ಯಲು ಪಣತೊಟ್ಟು ದುಡಿಯುತ್ತಿರುವ ದೇಶಬಾಂಧವರ ಹೊಣೆ ಬಹಳ. ಇಂತಹರಿಗೆ ಮಾರ್ಗದರ್ಶಕರಾದ ಮಹರ್ಷಿಗಳು ಇಂದೂ ಕೂಡ ಹಿಮಾಲಯದ ಪುಣ್ಯಕ್ಷೇತ್ರಗಳಲ್ಲಿ ಮತ್ತು ಅಲ್ಲಿನ ಗುಹೆಗಳಲ್ಲಿ ತಪಶ್ಚರ್ಯೆಯಲ್ಲಿ ಆಸಕ್ತರಾಗಿರುತ್ತಾರೆ. ದೇಶದ ಇತರ ಭಾಗಗಳಿಂದ ಹಿಮಾಲಯದಲ್ಲಿನ ತಮ್ಮ ನೆರವಿಗಾಗಿ ಬಯಸಿ ಬಂದ ಸಾಧುಸಂತರಿಗೆ ಆ ಮಹಾತ್ಮರು ಸರಿಯಾದ ಹಾದಿ ತೋರಿಸಿ ದೇಶೋದ್ಧಾರಕ್ಕಾಗಿ ಅಂಥವರನ್ನು ಮತ್ತೆ ಕಳುಹಿಸಿರುವ ಉದಾಹರಣೆಗಳು ಎಷ್ಟೋ ಇವೆ. ಆ ಮಹರ್ಷಿಗಳು ಸಮಸ್ತ ವಿದ್ಯೆಯಲ್ಲಿಯೂ ಪರಿಣತರಾಗಿರುವ ಕಾರಣ ತಮ್ಮ ಆಶ್ರಯವನ್ನು ಪಡೆದವರಿಗೆ ವೈದಿಕಸಂಸ್ಕೃತಿಯ ಅಂಗವಾಗಿ ಯೋಗ, ವಿಜ್ಞಾನ, ಆಯುರ್ವೇದ, ಜ್ಯೋತಿಷ, ವೇದಾಂತ ಮೊದಲಾದವುಗಳ ರಹಸ್ಯವನ್ನು ತಿಳಿಯಹೇಳಿ ಆ ಮೂಲಕ ಲೋಕಕಲ್ಯಾಣವನ್ನು ಅವರಿಂದ ನೆರವೇರಿಸಲು ಸಹಾಯಕರಾಗಿದ್ದಾರೆ.

ಮೇಲಿನ ಅಭಿಪ್ರಾಯವು ಸ್ವಾನುಭವದಿಂದುದಿಸಿದ ಸತ್ಯಾಂಶ. ಹಿಮಾಲಯದಲ್ಲಿನ ಬೃಹದಶ್ವ ಮುನಿಗಳ ಅನುಗ್ರಹ ಪಡೆದು, ಅವರ ನಿರ್ದೇಶದಂತೆ ಈ ಕಲ್ಯಾಣನಗರಿ ಬೆಂಗಳೂರಿನಲ್ಲಿ ನೆಲೆಸಿ ಮತ್ತು ಇಲ್ಲಿ ಈ ಹಿಂದೆ ಹೆಸರಿಸಿದ ಒಂದೊಂದನ್ನೂ ರೂಢಿಸಬೇಕೆಂಬ ಹಂಬಲಿನಿಂದ ಅದಕ್ಕಾಗಿ ಪ್ರಯತ್ನ ನಡೆಸುತ್ತಿರುವ ವಿಷಯವು ಈಗಾಗಲೇ ಅನೇಕರಿಗೆ ಮನದಟ್ಟಾಗಿದೆ.

ನಮ್ಮ ವೈದಿಕ ಸಂಸ್ಕೃತಿಯು ಶ್ರುತಿ, ಸ್ಮೃತಿ, ಇತಿಹಾಸ, ಕಾವ್ಯ, ಪುರಾಣ ಹೀಗೆ ಪರಂಪರೆಯಾಗಿ ಇವುಗಳಲ್ಲಿ ಇಳಿದು ಬಂದಿದೆ. ಇದಕ್ಕಾಗಿಯೇ ಕಥಾರೂಪವಾಗಿರುವ ಪುರಾಣಗಳ ಕಡೆಗೆ ಗಮನಕೊಟ್ಟು, ಅವುಗಳೊಳಗೆ ಅತ್ಯುತ್ತಮವಾದುದರಲ್ಲೊಂದಾದ '**ಗಣೇಶ ಪುರಾಣ**'ವನ್ನು ಸಾರ್ವಜನಿಕರ

ಯೋಗಕ್ಷೇಮವನ್ನು ಬಯಸಿ ಸಂಸ್ಕೃತ ಭಾಷೆಯಿಂದ ತಿಳಿಗನ್ನಡಕ್ಕೆ ಅನುವಾದಿಸಲು ಏರ್ಪಡಿಸಿದುದು ಮಾತ್ರವಲ್ಲದೆ ಅದರೊಳಗಿನ ತಿರುಳೆನಿಸಿದ 'ಗಣೇಶಗೀತೆ' ಎಂಬ ಆಧ್ಯಾತ್ಮಿಕ ಗ್ರಂಥವನ್ನು 'ಜಿತಬಿಂದು ಪ್ರಕಾಶನ ಸಮಿತಿ'ಯ ಮೂಲಕ ಬೆಳಕಿಗೆ ತಂದುದಾಯಿತು. ಈ ಗ್ರಂಥವನ್ನು ತಿಳಿಗನ್ನಡದಲ್ಲಿ ಅನುವಾದಿಸಿ ಜನಪ್ರಿಯತೆಯನ್ನು ಗಳಿಸಿದವರೆಂದರೆ ಶ್ರೀ ಬಿ. ಭೀಮಸೇನರಾವ್, M.Sc., ಇವರು. ಆಸ್ತಿಕ ಮಹಾಶಯರೆನಿಸಿದ ಇವರು ಕೃಷಿವಿಜ್ಞಾನದಲ್ಲಿನ ರಸಾಯನಶಾಸ್ತ್ರದ ನಿವೃತ್ತ ಪ್ರಾಧ್ಯಾಪಕರು (Retired Professor of Agricultural Chemistry). ಸಂಸ್ಕೃತ ಭಾಷೆಯಲ್ಲಿನ ಸಾಹಿತ್ಯ, ವಿಜ್ಞಾನ, ಯೋಗ, ವೇದ, ವೇದಾಂತ ಶಾಖೆಗಳಲ್ಲಿ ಪರಿಣತಿ ಮತ್ತು ಅನುಭವವನ್ನು ಪಡೆದವರಲ್ಲಿ ಗಣ್ಯರಿವರು. ಇಂತಹರು ನಮ್ಮ ಸಂಸ್ಥೆಯ ಚಟುವಟಿಕೆಗಳಲ್ಲಿ ಭಾಗವಹಿಸಿ ನಿಃಸ್ವಾರ್ಥತೆಯಿಂದ ಈ ದಿಕ್ಕಿನಲ್ಲಿ ಸೇವೆ ಸಲ್ಲಿಸಲು ವ್ಯೈತೆತ್ತಿರುವುದು ಒಂದು ಹೆಮ್ಮೆಯ ಸಂಗತಿ.

ಪ್ರೊ|| ಬಿ. ಭೀಮಸೇನರಾಯರು ವೈದಿಕ ಸಂಸ್ಕೃತಿ ಪ್ರಚಾರದಲ್ಲಿ ಅತ್ಯಾಸಕ್ತಿಯನ್ನು ವಹಿಸಿ ಆ ಹಾದಿಯಲ್ಲಿ ತಮ್ಮ ಅಮೋಘ ಸೇವೆಯನ್ನು ಸಲ್ಲಿಸುತ್ತಿರುವುದು ಬಹುಮಂದಿಗೆ ತಿಳಿದ ವಿಷಯ.—ಉದಹರಿಸಬೇಕೆಂದರೆ ಇವರು ತಮ್ಮ ಮೂವತ್ತೆರಡನೆಯ ವಯಸ್ಸಿನಲ್ಲಿಯೇ ಅಂದರೆ 1936ನೇ ಇಸವಿಯಲ್ಲಿಯೇ 'ಜೀವಬ್ರಹ್ಮೈಕ್ಯರಾಜಯೋಗಸಾರಾಮೃತ' ಎಂಬ ಹೆಸರಿನಲ್ಲಿ, ಕೀರ್ತಿಶೇಷರಾದ ಕಡಪ ಶ್ರೀ ಪರಮಹಂಸ ಸಚ್ಚಿದಾನಂದ ಯೋಗೀಶ್ವರರಿಂದ ತೆಲುಗು ಭಾಷೆಯಲ್ಲಿ ರಚಿತವಾದ ವೇದಾಂತಗ್ರಂಥವನ್ನು ಕನ್ನಡಿಸಿ ಕನ್ನಡಿಗರ ಮೆಚ್ಚಿಗೆಯನ್ನು ಪಡೆದಿರುತ್ತಾರೆ. ಇದು ಸುಮಾರು 2,000 ಪುಟಗಳುಳ್ಳ ಬೃಹದ್ಗ್ರಂಥವಾಗಿ ಎರಡು ಸಂಪುಟಗಳಲ್ಲಿ ಹೊರಬಿದ್ದು ಕರ್ನಾಟಕ ರಾಜ್ಯದ ಮೂಲೆಮೂಲೆಗಳಲ್ಲಿಯೂ ಹರಡಿದೆ. ಇದರ ಜೊತೆಗೆ ಇತರ ಸಣ್ಣಪುಟ್ಟ ವೇದಾಂತ ಗ್ರಂಥಗಳನ್ನೂ ತೆಲುಗು ಭಾಷೆಯಿಂದ ಕನ್ನಡಕ್ಕೆ ಅನುವಾದಿಸಿ ಜನಗಳ ಕೈಸೇರುವಂತೆ ಶ್ರೀ ರಾಯರು ಮಾಡಿರುತ್ತಾರೆ. ಇದೂ ಅಲ್ಲದೆ ಇತ್ತೀಚೆಗೆ "ಲೈಟ್ ಆನ್ ಯೋಗ" (Light on Yoga) ಎಂಬ ಇಂಗ್ಲಿಷ್ ಬೃಹದ್ಗ್ರಂಥವನ್ನು ಕನ್ನಡಿಸಿ 'ಯೋಗದೀಪಿಕೆ' ಎಂಬ ಶಿರೋನಾಮೆಯಿಂದ ಆ ಗ್ರಂಥವನ್ನು ಬೆಳಕಿಗೆ ತರಲು ಕಾರಣರಾಗಿದ್ದಾರೆ.

ಇಷ್ಟೇ ಅಲ್ಲದೆ ಶ್ರೀ ರಾಯರು 'ವ್ಯಾಸ ಹೃದಯ ಮತ್ತು ವಾಲ್ಮೀಕಿ ಹೃದಯ' ಎಂಬ ಗುಪ್ತನಾಮದಿಂದ ಕ್ರಮವಾಗಿ ಮಹಾಭಾರತ ಮತ್ತು ಶ್ರೀಮದ್ರಾಮಾಯಣ ಎಂಬ ಇತಿಹಾಸ ಮತ್ತು ಕಾವ್ಯಗಳನ್ನು ಇಂಗ್ಲಿಷ್ ಭಾಷೆಯಲ್ಲಿ ವಿದ್ವದ್ಗ್ರಂಥಗಳನ್ನಾಗಿ ಪ್ರಕಟಿಸಲು ಮುಖ್ಯ ಸಹಾಯಕರಾಗಿರುತ್ತಾರೆ.

ಇನ್ನೂ ಹೆಸರಿಸಬೇಕೆಂದರೆ ಶ್ರೀ ಭೀಮಸೇನರಾಯರು ವಿವಿಧ ಮಾಸ-ಪತ್ರಿಕೆಗಳಲ್ಲಿ ಈಗಾಗಲೇ ಪ್ರಕಟಿಸಿರುವ '**ಭಕ್ತಿಯೇ ಮುಕ್ತಿಗೆ ಯುಕ್ತಿ ಸಾಧನೆ**', '**ಮಹಾಭಾರತದಲ್ಲಿನ ಶ್ರೀಕೃಷ್ಣನ ಆದರ್ಶಪಾತ್ರ**', ಶ್ರೀ ಶಂಕರಭಗವತ್ಪಾದಕೃತ '**ಆನಂದಲಹರೀ ಸ್ತೋತ್ರ**' (ಅರ್ಥ ತಾತ್ಪರ್ಯ ಭಾವಾರ್ಥ ಟಿಪ್ಪಣಿಗಳೊಡನೆ), ಮುಖ್ಯ ಮುಖ್ಯ ವೇದ ಮಂತ್ರಗಳೂ ಮತ್ತು ಅವುಗಳ ಅರ್ಥ ಮತ್ತು ಭಾವ ಅಲ್ಲದೆ ಮಹಾಕವಿ ಕಾಳಿದಾಸ ಕೃತ '**ರಘುವಂಶ, ಕುಮಾರಸಂಭವ ಮತ್ತು ಮೇಘ ಸಂದೇಶ**' ಎಂಬ ಕಾವ್ಯತ್ರಯಗಳ ಕನ್ನಡ ಪದ್ಯಾನುವಾದ, ಇವೆಲ್ಲವನ್ನೂ ಗ್ರಂಥರೂಪವಾಗಿ **ಜಿತಬಿಂದು ಪ್ರಕಾಶನ ಸಮಿತಿಯು** ಆಸ್ತಿಕರ ಉಪಯೋಗಕ್ಕಾಗಿ ಪ್ರಕಟಿಸಬೇಕೆಂಬ ಉದ್ದೇಶ ಹೊಂದಿದೆ.

ಪ್ರಕೃತ ಶ್ರೀ ಭೀಮಸೇನರಾಯರು ವೈದಿಕ ಸಂಸ್ಕೃತಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟು '**ಋಗ್ಯಜುಸ್ಸಂಧ್ಯಾವಂದನೆ**' ಎಂಬ ನಿತ್ಯಕರ್ಮ ಪ್ರಧಾನವಾದ ಗ್ರಂಥವೊಂದನ್ನು ಹೊರತರಲು ದಿವಂಗತ ಶ್ರೀಮಾನ್ ಸಿ. ಎರ್. ಶಾಸ್ತ್ರಿಗಳು ಮತ್ತು ವಿದ್ವಾನ್ ಹೆಚ್. ಸೀತಾರಾಮಶಾಸ್ತ್ರಿಗಳು ಇವರಿಗೆ ನೆರವಾಗಿದ್ದ ವಿಷಯ ಈ ಗ್ರಂಥದ 'ಬಿನ್ನಹ'ವೆಂಬುದರಲ್ಲಿ ಸೂಚಿತವಾಗಿದೆ. ಈಗ ಅವರು "**ಪುರುಷಸೂಕ್ತಪೂರ್ವಕ ಇಷ್ಟದೇವತಾರ್ಚನ ಕ್ರಮ**" ಮತ್ತು '**ಶ್ರೀರಾಮ ಪೂಜಾವಿಧಿಃ**' ಎಂಬ ಶಿರೋನಾಮೆಯಿಂದ ಸಾಮಾನ್ಯವಾಗಿ ಇಷ್ಟದೇವತೆಗೆ ವಿಶೇಷವಾಗಿ ಶ್ರೀರಾಮಚಂದ್ರನಿಗೆ ವೈದಿಕ ವಿಧಿಯಿಂದ ಸಲ್ಲಿಸುವ ಷೋಡಶೋಪಚಾರ ಪೂಜಾ ಕ್ರಮವನ್ನು ಹಿಂದೆ ಹೆಸರಿಸಿದ ಶ್ರೀ ಸಿ. ಎರ್. ಶಾಸ್ತ್ರಿಗಳು ಬರೆದಿಟ್ಟು ಶ್ರೀ ರಾಯರ ವಶಪಡಿಸಿದ್ದ ಹಸ್ತಪ್ರತಿಯನ್ನೂ, ಈ ದಿಕ್ಕಿನಲ್ಲಿ ವೈದಿಕ ವಿದ್ವಾಂಸರು ಪ್ರಕಟಿಸಿದ ಇತರ ಮಾತೃಕೆಗಳನ್ನೂ ಪರಿಶೀಲಿಸಿ, ಅತ್ಯವಶ್ಯಕವೆನಿಸಿದ ಉಳಿದ ವೈದಿಕ ಮಂತ್ರಗಳನ್ನು ಸಂಗ್ರಹಿಸಿ, ಋಕ್‌ಶಾಖೆ ಮತ್ತು ಯಜುಶ್ಶಾಖೆಗಳಿಗೆ ಸೇರಿದ ಆಸ್ತಿಕವರ್ಗದವರ ಅನುಕೂಲ

ಕ್ಕಾಗಿ ಆಯಾ ಸಂದರ್ಭಗಳಿಗನುಗುಣವಾಗಿ ವಿವಿಧ ವೇದಮಂತ್ರಗಳನ್ನು ಸೇರಿಸಿ, ಸಸ್ವರವಾಗಿ ಅವುಗಳನ್ನು ಅನುಗೊಳಿಸಿ ಪ್ರಕಟಿಸಲು ತಮ್ಮದೇ ಆದ ಮಾತೃಕೆಯನ್ನು ಅಚ್ಚಿಗೆ ಸಿದ್ಧಗೊಳಿಸಿರುವುದು ಶ್ಲಾಘ್ಯವಾದ ವಿಷಯ. ಇಂತಹ ಉದ್ಗ್ರಂಥವನ್ನು ಆಸ್ತಿಕರಾದ ಜನತೆಯ ಉಪಯೋಗಕ್ಕೆ ಒದಗಿಸ ಬಯಸಿ ಮಹತ್ತರವಾದ ಕಾರ್ಯಕ್ಕೆ ಯತ್ನಿಸಿದ ಈ ಮಹಾಶಯರು ತಮ್ಮ ಈ ಘನೋದ್ದೇಶವನ್ನು ನಮ್ಮ ಮುಂದಿಟ್ಟಂದು ಅದಕ್ಕಾಗಿ ಸಂಪೂರ್ಣ ಸಹಕಾರ ನೀಡುವ ನಿರ್ಧಾರಕ್ಕೆ ಜಿತಬಿಂದು ಪ್ರಕಾಶನ ಸಮಿತಿಯು ಮನಃಪೂರ್ವಕ ಸಮ್ಮತಿಯಿತ್ತಿತು. ಈ ಮೊದಲೇ ಇತರ ಧಾರ್ಮಿಕ ಸಂಸ್ಥೆಗಳೂ ಮತ್ತು ಉದಾರಿಗಳಾದ ಇತರ ಆಸ್ತಿಕ ಮಹಾಶಯರೂ ನೆರವಾಗಿದ್ದಾರೆ. ಪ್ರಕಟಣೆಯ ವೆಚ್ಚಕ್ಕೆ ಕೊರತೆಯಾದುದನ್ನು ನಮ್ಮ ಸಂಸ್ಥೆಯೇ ವಹಿಸುವುದಾಗಿ ಭರವಸೆ ಯನ್ನು ಕೊಟ್ಟು ಅದನ್ನು ಪ್ರಕಟಿಸುವ ಮತ್ತು ಆಸ್ತಿಕವರ್ಗದಲ್ಲಿ ಹರಡುವ ಹೊಣೆಯನ್ನು ಹೊತ್ತಿದೆ ಎಂದು ತಿಳಿಸಲು ಸಂತೋಷಿಸುತ್ತೇವೆ.

ಈ ಗ್ರಂಥಪ್ರತಿಗಳಲ್ಲಿ ನಾಲ್ಕನೆಯ ಒಂದು ಭಾಗವನ್ನು ವೈದಿಕ ಧರ್ಮ ಸಂಸ್ಥೆಗಳಿಗೂ, ಕೊಳ್ಳಲಾರದ ಆಸ್ತಿಕವರ್ಗಕ್ಕೂ ಮತ್ತು ಯೋಗ್ಯರಾದ ವಿದ್ಯಾರ್ಥಿಗಳಿಗೂ ಬಳುವಳಿಯಾಗಿ ಕೊಡಲುದ್ದೇಶಿಸಿದೆಯಾಗಿ ಪ್ರಕಟಣೆಯ ವೆಚ್ಚದಷ್ಟೇ ಬೆಲೆಯನ್ನು ಇದಕ್ಕೆ ಇರಿಸಲಾಗಿದೆ. ಇದರ ಉಪಯೋಗವು ನಿತ್ಯಕರ್ಮನಿಷ್ಠರಲ್ಲಿ ಹೆಚ್ಚಾಗಿ ಹರಡಲಿ ಎಂಬುದೇ ಇದರ ಮುಖ್ಯೋದ್ದೇಶ.

ಆಸ್ತಿಕಮಹಾವರ್ಗದಲ್ಲಿ ಮತ್ತೊಂದು ಅರಿಕೆ. ಶ್ರೀಮಾನ್ ಭೀಮಸೇನ ರಾಯರು ವೈದಿಕ ಸಂಸ್ಕೃತಿಯ ವಿಷಯದಲ್ಲಿ ಶ್ಲಾಘ್ಯಸೇವೆಯನ್ನು ಸಲ್ಲಿಸುವ ಸಲುವಾಗಿ ನಿಃಸ್ವಾರ್ಥತೆಯಿಂದ ಈಗಾಗಲೇ ನಿತ್ಯಕರ್ಮಗಳಲ್ಲಿ ಅತಿ ಮುಖ್ಯ ವೆನಿಸಿದ 'ಸಂಧ್ಯಾವಂದನೆ' ಮತ್ತು 'ಇಷ್ಟದೇವತಾರ್ಚನ ಕ್ರಮ' ಇವುಗಳನ್ನು ಬೆಳಕಿಗೆ ತರಲು ಅಪರಿಮಿತವಾದ ಶ್ರದ್ಧೆ ಮತ್ತು ಶ್ರಮ ವಹಿಸಿರುವುದರಿಂದಲೂ ಅಲ್ಲದೆ ಈ ಮುಂದೆ ಇತರ ವೈದಿಕಗ್ರಂಥಗಳನ್ನೂ ಮತ್ತು ವೈದಿಕಸಂಸ್ಕೃತಿಗೆ ಮೀಸಲಾದ ಇತಿಹಾಸ ಪುರಾಣಗಳಲ್ಲಿನ ಮುಖ್ಯ ಭಾಗಗಳನ್ನು ಕನ್ನಡಿಗರ ಉಪಯೋಗಕ್ಕಾಗಿ ತಮ್ಮ ಸೇವೆಯನ್ನು ಸಲ್ಲಿಸಲು ವಾಗ್ದಾನ ಮಾಡಿರುವುದ ರಿಂದಲೂ ಪರಮಾತ್ಮನು ಈ ಸೇವೆಗಳನ್ನೆಲ್ಲಾ ಅವರಿಂದ ಸ್ವೀಕರಿಸುವ

ಸಲುವಾಗಿ ಅವರಿಗೆ ಆಯುರಾರೋಗ್ಯಗಳನ್ನು ಕರುಣಿಸಲಿ ಎಂಬ ನಮ್ಮ ಪುನಃ ಪೂರ್ವಕವಾದ ಪ್ರಾರ್ಥನೆಯನ್ನು ಆ ಪರಮಾತ್ಮನಲ್ಲಿ ಸಲ್ಲಿಸುತ್ತೇವೆ.

ಇತಿ,

ತಾ|| 15–1–1976 ಜಿತಬಿಂದು ಮಹರ್ಷಿ

---

# ಬಿನ್ನಹ

ಈಗ್ಗೆ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಅಂದರೆ 1955ನೇ ಇಸವಿಯಲ್ಲಿಯೇ ಬೆಂಗಳೂರು ನರಸಿಂಹರಾಜಾ ಕಾಲೋನಿಯಲ್ಲಿ ಸ್ಥಾಪಿತವಾದ ದೈವಭಕ್ತಿ ಪ್ರಚಾರಿಣೀ ಸಭೆಯು ವೈದಿಕಸಂಸ್ಕೃತಿಯನ್ನು ಜನಸಾಮಾನ್ಯದಲ್ಲಿ ರೂಢಿಸಬೇಕೆಂದು ಸಂಕಲ್ಪಿಸಿ ಅದನ್ನು ಕಾರ್ಯರೂಪಕ್ಕೆ ತರಲು ಆ ಬಗ್ಗೆ ಆಸ್ತಿಕಮಹಾಶಯರ ನೆರವನ್ನು ಕೋರಿತು. ಇಂತಹ ಭವ್ಯವಾದ ಕರೆಗೆ ಓಗೊಟ್ಟವರಲ್ಲಿ ಮೊದಲಿಗರೆಂದರೆ ವೈದಿಕವಿದ್ಯೆಯಲ್ಲಿ ಪರಿಣತರೂ, ಆಂಗ್ಲ-ಭಾಷೆಯಲ್ಲಿ ನಿಷ್ಣಾತರೂ, ಪ್ರಖ್ಯಾತರಾದ ಹೈಕೋರ್ಟ್ ಅಡ್ವೊಕೇಟರೂ, ಅಲ್ಲದೆ ವಿನಯಾದಿ ಸದ್ಗುಣಸಂಪನ್ನರೂ ಎಂದು ಹೆಸರುಪಡೆದ ಶ್ರೀಮಾನ್ ಸಿ. ನರಸಿಂಹಶಾಸ್ತ್ರಿಗಳು (Sri C. N. Sastry, B.A., LL B.) ದ್ವಿಜಾತಿಯ ವರ್ಗಕ್ಕೆ ಅತಿಮುಖ್ಯ ನಿತ್ಯಕರ್ಮವೆನಿಸಿದ 'ಸಂಧ್ಯಾವಂದನೆ'ಯಲ್ಲಡಗಿರುವ ರಹಸ್ಯವನ್ನು ಹೊರಗೆಡಹುವ ಘನೋದ್ದೇಶದಿಂದ **'ಋಗ್ಯಜುಸ್ಸಂಧ್ಯಾ-ವಂದನಂ'** ಎಂಬ ಶಿರೋನಾಮೆಯ ಗ್ರಂಥದ ಹಸ್ತಪ್ರತಿಯನ್ನು ಸಿದ್ಧಗೊಳಿಸಿದರು. ಮೇಲ್ಕಂಡ ಸಭೆಯು ವಿದ್ವಾನ್ ಹೆಚ್. ಸೀತಾರಾಮಶಾಸ್ತ್ರಿಗಳ ಮತ್ತು ಈ ಲೇಖಕನ ನೆರವಿನಿಂದ ಆ ಗ್ರಂಥವನ್ನು ಪ್ರಕಟಿಸಿ ಆಸ್ತಿಕರ ಮನ್ನಣೆಯನ್ನು ಗಳಿಸಿತು. ಇದರ ಪರಿಣಾಮವಾಗಿ ಪ್ರಥಮ ಮುದ್ರಣದ ಒಂದು ಸಾವಿರ ಪ್ರತಿಗಳೆಲ್ಲವೂ ಅತಿ ಶೀಘ್ರವಾಗಿ ದಕ್ಷಿಣ ಮತ್ತು ಉತ್ತರ ಕರ್ನಾಟಕದಲ್ಲಿನ ಆಸ್ತಿಕ ವರ್ಗದ ಕೈಸೇರಿದುದು ಮಾತ್ರವಲ್ಲದೆ ಆ ಗ್ರಂಥದ ಪುನರ್ಮುದ್ರಣಕ್ಕೆ ಕರೆ ಕೊಟ್ಟಿತು. ಗ್ರಂಥದ ಪ್ರಯೋಜನವನ್ನು ಮತ್ತಷ್ಟು ಹೆಚ್ಚಿಸಬೇಕೆಂಬ ಉದ್ದೇಶದಿಂದ ಮತ್ತೆ ಪರಿಷ್ಕರಿಸಿ ಮುದ್ರಣಕ್ಕೆ ಸಿದ್ಧಪಡಿಸಬೇಕೆಂಬ ಪ್ರಯತ್ನದಲ್ಲಿರುವಂತೆಯೇ ದುರ್ದೈವದಿಂದ ಶ್ರೀಮಾನ್ ಸಿ. ಎನ್. ಶಾಸ್ತ್ರಿಗಳು ಅನಿರೀಕ್ಷಿತವಾಗಿ ನಮ್ಮನ್ನು ಬಿಟ್ಟು ಅಗಲಿದರು. ಅಲ್ಲದೆ ಈ ಲೇಖಕನೂ ಕೂಡ ಸರ್ಕಾರಿ ಉದ್ಯೋಗದ ನಿಮಿತ್ತ ಬೆಂಗಳೂರು ಬಿಟ್ಟು ಧಾರವಾಡಕ್ಕೆ ಹೋಗಬೇಕಾಗಿತ್ತಾಗಿ ಉದ್ದೇಶಿಸಿದ ಸಂಕಲ್ಪ ನೆರವೇರಲು ಅಡ್ಡಿ ಬಂದಿತು. ಬೆಂಗಳೂರಿಗೆ ಹಿಂದಿರುಗಿ ಮತ್ತೆ ಈ ಕಾರ್ಯಕ್ಕೆ ತೊಡಗಬೇಕೆಂದಿರುವಷ್ಟರಲ್ಲಿಯೇ ವೇದಮೂರ್ತಿ ವಿದ್ವಾನ್ ಹೆಚ್. ಸೀತಾರಾಮಶಾಸ್ತ್ರಿಗಳೂ ಕೂಡ

ದೈವಾಧೀನರಾದರು. ಈ ಕಾರಣ ಈ ಲೇಖಕನು ಒಂಟಿಯಾಗಿ ಇಂತಹ ಸಾಹಸದ ಹೊಣೆ ಹೊರಲು ಧೈರ್ಯ ಸಾಲದೆ ಆ ಕಾರ್ಯವನ್ನು ಅಲ್ಲಿಗೇ ಕೈಬಿಟ್ಟದ್ದಾಯಿತು.

ಈ ಹಿಂದೆ ಶ್ರೀನಿವಾಸ್ ಸಿ. ಎನ್. ಶಾಸ್ತ್ರಿಗಳು ಈ ಲೇಖಕನಿಗೆ ಮಹಾಮಂತ್ರೋಪದೇಶಗಳನ್ನು ಅನುಗ್ರಹಿಸಿ ಪರಮಗುರುವೆನಿಸಿದುದು ಮಾತ್ರವಲ್ಲದೆ ಈ ವ್ಯಕ್ತಿಯಲ್ಲಿ ಅತ್ಯಂತ ಪುತ್ರವಾತ್ಸಲ್ಯವನ್ನು ತೋರಿಸುತ್ತಿದ್ದರು. ಇದರ ಪರಿಣಾಮವಾಗಿ ಆ ಮಹಾನೀಯರು ತಾವು ಅದುವರೆಗೆ ಸಂಗ್ರಹಿಸಿ ಸಿದ್ಧಗೊಳಿಸಿದ್ದ 'ಪುರುಷಸೂಕ್ತಪೂರ್ವಕ ದೇವತಾರ್ಚನ ವಿಧಿಃ' ಎಂಬ ಗ್ರಂಥದ ಹಸ್ತಪ್ರತಿಯನ್ನು ಕೊಟ್ಟು ಅದನ್ನು ಮುದ್ರಣದ ಮೂಲಕ ಬೆಳಕಿಗೆ ತರಬೇಕಾದ ಹೊಣೆಯನ್ನು ಈ ಲೇಖಕನಿಗೇ ವಹಿಸಿದ್ದರು. ಸುಮಾರು ಹದಿನೈದು ವರ್ಷಗಳವರೆಗೂ ಪೆಟ್ಟಿಗೆಯ ಸೆರೆಯಲ್ಲಿದ್ದ ಆ ಹಸ್ತಪ್ರತಿಯನ್ನು ಹೇಗಾದರೂ ಮಾಡಿ ಪ್ರಕಟಿಸಿ ತನ್ಮೂಲಕ ಗುರುಗಳ ಆಜ್ಞಾಪರಿಪಾಲನೆಯನ್ನು ಮಾಡಬೇಕಾದುದು ತನ್ನ ಪ್ರಥಮಕರ್ತವ್ಯವೆಂದೆಣಿಸಿ ಆ ದಿಕ್ಕಿನಲ್ಲಿ ಲೇಖಕನ ಪ್ರಯತ್ನ ನಡೆದು, ಮೊದಲು ಈ ಘನೋದ್ದೇಶವನ್ನು ಶ್ರೀ ಮಲ್ಲಿಕಾರ್ಜುನಸ್ವಾಮಿಯ ಆಶ್ರಯದಲ್ಲಿನ ಶ್ರೀ ಶಂಕರಜಯಂತೀ ಸಭೆಯ ಕಾರ್ಯಕಾರಿಣೀ ಸಮಿತಿಯ ಮುಂದೆ ಮಂಡಿಸಲಾಯಿತು. ಒಡನೆಯೇ ಆಸ್ತಿಕಶಿರೋಮಣಿಗಳೆನಿಸಿದ ಆ ಸಮಿತಿಯ ಅಧ್ಯಕ್ಷ ಮಾನ್ಯ ಬಿ. ಸೂರ್ಯನಾರಾಯಣರಾಯರು, ಬಿ.ಎ. (ನಿವೃತ್ತ ಸೀನಿಯರ್ ಅಸಿಸ್ಟೆಂಟ್ ಕಮಿಷನರ್), ಇದರಲ್ಲಿ ಹೆಚ್ಚು ಆಸಕ್ತಿ ವಹಿಸಿ ಸಮಿತಿಯ ಸಂಪೂರ್ಣ ಸಹಕಾರವನ್ನು ಕೊಡಿಸುವುದರ ಮೂಲಕ ತಮ್ಮಲ್ಲಿ ಆಗ್ಗೆ ಸಂಗ್ರಹವಾಗಿದ್ದ ಹಣವೆಲ್ಲವನ್ನೂ—ಅಂದರೆ ಆರುನೂರಹತ್ತು ರೂಪಾಯಿಗಳನ್ನು—ಮಂಜೂರುಮಾಡಿಸಿದರು. ಈ ಶುಭೋದಯವೇ ಮುಂದೆ ಬರಲಿರುವ ಗ್ರಂಥದ ಪ್ರಕಟಣೆಗೆ ನಾಂದಿಯಾಯಿತು. ಈ ವಿಷಯವನ್ನು ಸೂಚಿಸಿದೊಡನೆಯೇ ಇತರ ಆಸ್ತಿಕಮಹಾಶಯರು ತಾವಾಗಿಯೇ ಆರ್ಥಿಕ ನೆರವನ್ನು ನೀಡಲು ಮುಂದೆ ಬಂದರು. ಅವರಲ್ಲಿ ಮೊದಲಿನ ಉದಾರಿಗಳೆಂದರೆ ಇಂಜಿನಿಯರ್ ಕಂಟ್ರಾಕ್ಟರ್ ಆದ ಶ್ರೀ ರಾಮಮೂರ್ತಿ, ಬಿ.ಇ., ಅವರು. ಆ ಬಳಿಕ ಮತ್ತೊಬ್ಬ ಇಂಜಿನಿಯರ್ ಕಂಟ್ರಾಕ್ಟರ್ ಶ್ರೀ ಹೆಚ್. ರಾಮಸ್ವಾಮಿ, ಬಿ.ಎಸ್‌ಸಿ., ಬಿ.ಇ. ಅದರಂತೆಯೇ ಛಾರ್ಟರ್ಡ್ ಅಕೌಂಟೆಂಟ್ ಮತ್ತು

ಟ್ರಿಬ್ಯೂನಲ್ ಸದಸ್ಯರಾದ ಟಿ. ರಾಮಕೃಷ್ಣಯ್ಯ, ಎಂ.ಕಾಂ., ಇತ್ಯಾದಿ, ಫ್ಲೇವರ್ ಕಾಫಿ ವರ್ಕ್ಸ್‌ನ ಶ್ರೀಮಾನ್ ಬಿ. ಕೆ. ಅನಂತರಾಮಯ್ಯ, ಶ್ರೀ ರಾಮಾಯಣ ಪ್ರಕಟನಾ ಸಮಿತಿಯ ಪರವಾಗಿ ಶ್ರೀಮಾನ್ ಡಿ. ಸಿ. ಅನಂತ-ರಾಮಯ್ಯ, ಬಿ.ಇ. ಅವರು, ಹೋಮಿಯೋಪತಿಕ್ ಡಾಕ್ಟರ್ ಶ್ರೀಮಾನ್ ಎ. ಆರ್. ಎ. ಆಚಾರ್ಯ ಈ ಮಹನೀಯರುಗಳು ಈ ದಿಕ್ಕಿನಲ್ಲಿ ತಮ್ಮ ತಮ್ಮ ಆರ್ಥಿಕ ನೆರವನ್ನು ನೀಡಿದರು. ಇವರ ಜೊತೆಗೆ ಶ್ರೀಯುತರಾದ ರಾಮಸ್ವಾಮಿ, ಬಿ.ಎ., ಎಲ್‌ಎಲ್.ಬಿ. (ನಿವೃತ್ತ ಮುನ್ಸೀಫರು), ಶ್ರೀ ಹನುಮಂತರಾವ್, ಎಂ.ಎ., ಎಲ್‌ಎಲ್.ಬಿ. (ನಿವೃತ್ತ ಅಂಡರ್ ಸೆಕ್ರೆಟರಿ), ಶ್ರೀ ಸಂಪಿಗೆ ವೆಂಕಟೇಶಯ್ಯ ಮತ್ತು ಇತರ ಉದಾರಿಗಳೂ ನೆರವಾದವರು. ಇವೆಲ್ಲಕ್ಕಿಂತಲೂ ಹೆಚ್ಚಾಗಿ ಇಂತಹ ಘನೋದ್ದೇಶಕ್ಕೆ ತುಂಬುಬೆಂಬಲ ಮತ್ತು ಅಧಿಕ ಪ್ರಮಾಣದ ಆರ್ಥಿಕ ನೆರವನ್ನು ನೀಡಿದವರೆಂದರೆ ಶ್ರೀ ಶ್ರೀ **ಜಿತಬಿಂದು ಮಹರ್ಷಿಗಳು** ಮತ್ತು ಅವರ ಪ್ರಕಾಶನ ಸಮಿತಿ. ಶ್ರೀ ಶ್ರೀಗಳ ಕೊಡುಗೈಯ ಉತ್ತೇಜನ ವಿರದಿದ್ದಲ್ಲಿ ಈ ಗ್ರಂಥವನ್ನು ಬೆಳಕಿಗೆ ತರುವುದು ಕಷ್ಟಸಾಧ್ಯವೂ ಅತಿ ವಿಳಂಬವೂ ಆಗುತ್ತಿದ್ದಿತು. ಅತಿ ಶೀಘ್ರದಲ್ಲಿಯೇ ಪ್ರಕಟಿಸಲು ಹೃತ್ಪೂರ್ವಕ ವಾದ ನೆರವು ಶ್ರೀ ಶ್ರೀಗಳವರಿಂದ ದೊರಕಿದ ಕಾರಣ ಜಿತಬಿಂದು ಪ್ರಕಾಶನ ಸಮಿತಿಯೇ ಪ್ರಕಟಣೆಯ ಹೊಣೆ ಹೊತ್ತಿರುತ್ತದೆ. ಅಲ್ಲದೆ ಇದುವರೆಗೆ ಈ ದಿಕ್ಕಿನಲ್ಲಿ ತಮ್ಮ ಉದಾರವಾದ ನೆರವನ್ನು ನೀಡಿದವರಿಗೂ ಮತ್ತು ಇನ್ನು ಮುಂದೆಯೂ ಇದಕ್ಕೆ ಸಹಕಾರ ಕೊಡುವವರಿಗೂ ತನ್ನ ಮನಃಪೂರ್ವಕವಾದ ಕೃತಜ್ಞತೆಯನ್ನು ವ್ಯಕ್ತಪಡಿಸಬೇಕಾದುದು ಈ ಲೇಖಕನ ಪ್ರಥಮ ಕರ್ತವ್ಯ.

**ಹಸ್ತಪ್ರತಿ**—ಈ ಹಿಂದೆ ಸೂಚಿಸಿದ್ದಂತೆ ದಿವಂಗತ ಶ್ರೀಮಾನ್ ಸಿ. ಎನ್. ಶಾಸ್ತ್ರಿಗಳು ಸಿದ್ಧಗೊಳಿಸಿಟ್ಟಿದ್ದ ಹಸ್ತಪ್ರತಿಯನ್ನೇ ಮುಖ್ಯವಾಗಿ ಇಟ್ಟುಕೊಂಡು, 'ದೇವತಾರ್ಚನ ಕ್ರಮ'ದ ವಿಷಯದಲ್ಲಿ ಇತರ ಮಹನೀಯರು ಈಗಾಗಲೇ ಪ್ರಕಟಿಸಿರುವ ವಿವಿಧ ಪ್ರತಿಗಳನ್ನೂ ಶ್ರೀ ಶೃಂಗೇರಿಯಲ್ಲಿ ಪ್ರಕಟಿತ ವಾದ 'ಆಹ್ನಿಕ ಮಂಜರೀ' ಗ್ರಂಥವನ್ನೂ ಅಲ್ಲದೆ 'ಯಜುರ್ವೇದ ನಿತ್ಯಕರ್ಮ' ಮೊದಲಾದ ಇತರ ಪುಸ್ತಕ ಪ್ರತಿಗಳನ್ನೂ ಪರಿಶೀಲಿಸಿ ಅವುಗಳಲ್ಲಿನ ಅತ್ಯವಶ್ಯಕ ವೆನಿಸಿದ ಹಲವಾರು ಭಾಗಗಳನ್ನು ಸಂಗ್ರಹಿಸಿ ಬೇರೊಂದು ಹಸ್ತಪ್ರತಿಯನ್ನು ಈ ಲೇಖಕನು ಸಿದ್ಧಗೊಳಿಸಿ ಮುದ್ರಣಕ್ಕೆ ಒದಗಿಸಿರುತ್ತಾನೆ. ಮೇಲೆ ಹೆಸರಿಸಿದ

ಗ್ರಂಥಗಳ ಕರ್ತರಿಗೂ ಆ ಪ್ರತಿಗಳನ್ನು ತನಗೆ ಒದಗಿಸಿದ ಮಹನೀಯರಿಗೂ ಲೇಖಕನ ಹೃತ್ಪೂರ್ವಕವಾದ ವಂದನೆಗಳು.

**ಮುದ್ರಣ**—ಈ ಗ್ರಂಥದ ಮುದ್ರಣಕಾರ್ಯವನ್ನು ಆನಂದ್ ಪ್ರಿಂಟರ್ಸ್ ಮಾಲಿಕರಾದ ಶ್ರೀಮಾನ್ ಶ್ರೀಶಮೂರ್ತಿಯವರಿಗೆ ವಹಿಸಲಾಯಿತು. ಈ ಮಹನೀಯರು ಆ ಕಲೆಯಲ್ಲಿ ತುಂಬ ನುರಿತವರು ಮಾತ್ರವಲ್ಲದೆ ಆಸ್ತಿಕರೂ ಮತ್ತು ವೈದಿಕ ಸಂಸ್ಕೃತಿ ಪ್ರಸಾರದಲ್ಲಿ ಅತ್ಯಂತ ಆಸಕ್ತಿಯುಳ್ಳವರೂ ಆಗಿರುವ ಕಾರಣ, ಅವರು ಈ ಕಾರ್ಯನಿರ್ವಹಣೆಯಲ್ಲಿ ಅತ್ಯಂತ ಶ್ರದ್ಧೆವಹಿಸಿ ತಪ್ಪಿಲ್ಲದಂತೆ ಅಂದವಾಗಿ ಮುದ್ರಿಸಿ ಉಪಕರಿಸಿರುತ್ತಾರೆ. ಈ ಗ್ರಂಥದಲ್ಲಿ ಅಲ್ಲಲ್ಲಿ ಲೋಪ-ದೋಷಗಳು ಕಂಡುಬರುವುದಾದರೆ ಅದು ಹಸ್ತಪ್ರತಿಯನ್ನು ಒದಗಿಸಿದ ಲೇಖಕನದೇ ಹೌದು.

**ಸಮರ್ಪಣೆ**— ಈ ಪುಟ್ಟ ಹೊತ್ತಿಗೆಯು ಹೊರಬರಲು ಅತ್ಯಂತ ಶ್ರದ್ಧೆ ಮತ್ತು ಶ್ರಮ ವಹಿಸಿ ಹಸ್ತಪ್ರತಿಯನ್ನು ಸಿದ್ಧಗೊಳಿಸಲು ಮುಖ್ಯ-ಕಾರಣರಾದ ಪರಮಪೂಜ್ಯ ಗುರುಗಳೆನಿಸಿದ ದಿವಂಗತ ಶ್ರೀಮಾನ್ ಸಿ. ಎನ್. ಶಾಸ್ತ್ರಿಗಳವರೇ ಕಾರಣರಾದುದರಿಂದ ಅವರ ಆತ್ಮಕ್ಕೆ ಶಾಂತಿ ನೀಡುವ ಸಲುವಾಗಿ ಈ ಗ್ರಂಥವನ್ನು ಅವರ ಮಹಾ ವ್ಯಕ್ತಿತ್ವಕ್ಕೆ ಸಮರ್ಪಿಸಬೇಕಾದುದು ತನ್ನ ಕರ್ತವ್ಯಕರ್ಮವೆಂದೆಣಿಸಿ ಈ ಲೇಖಕನು ಅದನ್ನು ಅತ್ಯಂತ ಭಕ್ತಿ ವಿನಯಗಳಿಂದ ಆ ಪೂಜ್ಯ ಗುರುಗಳಿಗೆ ನಿವೇದಿಸುತ್ತಾನೆ. ಈ ಪುಟ್ಟ ಹೊತ್ತಿಗೆಯು ಆಸ್ತಿಕವರ್ಗದವರ ಆಶಯವನ್ನು ಅಲ್ಪಪ್ರಮಾಣದಲ್ಲಿಯಾದರೂ ಪೂರೈಸುವುದಾದರೆ ಅದರಿಂದ ಕೀರ್ತಿಶೇಷರಾದ ಶ್ರೀಮಾನ್ ಶಾಸ್ತ್ರಿಗಳವರಿಗೆ ತೃಪ್ತಿಯೂ ಸಂಗ್ರಾಹಕನ ಶ್ರಮಕ್ಕೆ ತಕ್ಕ ಫಲವೂ ದೊರಕುವುದೆಂಬ ದೃಢ ನಂಬಿಕೆ ಲೇಖಕನಿಗೆ ಮೂಡಿದೆ.

—**ಬುರುಗನಹಳ್ಳಿ ಭೀಮಸೇನಶರ್ಮ**
ಸಂಗ್ರಾಹಕ

# ಪ್ರಸ್ತಾವನಾ

ವೈದಿಕ ಸಂಸ್ಕೃತಿಯಲ್ಲಿ ನಿತ್ಯಕರ್ಮಾನುಷ್ಠಾನಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡಲಾಗಿದೆ. ಈ ನಿತ್ಯಕರ್ಮಗಳು ಆರು ಬಗೆ. ಇವೇ ಆಚಾರಶೀಲನಿಗೆ ವಿಧಿಸಿರುವ ಷಟ್ಕರ್ಮಗಳು ಎಂಬುದು ಶಾಸ್ತ್ರವಚನ. ಅವು ಕ್ರಮವಾಗಿ

ಶ್ಲೋ ॥ ಸ್ನಾನಂ, ಸಂಧ್ಯಾಜಪೋ, ಹೋಮೋ * ದೇವತಾನಾಂ ಚ ಪೂಜನಮ್ ।

ಆತಿಥ್ಯಂ, ವೈಶ್ವದೇವಂ ಚ * ಷಟ್ಕರ್ಮಾಣಿ ದಿನೇ ದಿನೇ ॥

ಅಂದರೆ ಸ್ನಾನ, ಸಂಧ್ಯಾಚರಣೆಯಲ್ಲಿನ ಗಾಯತ್ರೀಮಂತ್ರಜಪ, ಅಗ್ನಿಕಾರ್ಯದಲ್ಲಿ ಮುಖ್ಯವಾದ ಹೋಮ, ಇಷ್ಟದೇವತಾರ್ಚನೆ, ಅತಿಥಿಸತ್ಕಾರ, ಮತ್ತು ವೈಶ್ವದೇವ—ಈ ವಿಧವಾದ ಆರು ಬಗೆಯ ಕರ್ಮಗಳನ್ನು ಅಧಿಕಾರಿಯು ಪ್ರತಿದಿನವೂ ಆಚರಿಸಲೇಬೇಕು. ದಿನದಿನವೂ ಸ್ನಾನ ಮಾಡಿದ ಬಳಿಕ ಸಂಧ್ಯಾವಂದನೆಯನ್ನು ಅನುಷ್ಠಿಸುವುದು ಮೊದಲನೆಯ ಕರ್ಮವಾದರೆ ಇಷ್ಟದೇವತಾರ್ಚನೆಯು ಎರಡನೆಯ ಕರ್ತವ್ಯಕರ್ಮ. ಇಷ್ಟದೇವತೆಯನ್ನು ಪೂಜಿಸುವ ವಿಧಾನದ ವಿವರಣೆಯೇ ಈ ಸಣ್ಣ ಹೊತ್ತಿಗೆಯ ಮುಖ್ಯ ಉದ್ದೇಶ.

ಮಾನವನ ಮುಖ್ಯಧರ್ಮವೆಂದರೆ ತನಗೆ ಜನ್ಮವಿತ್ತು, ಪೋಷಿಸಿ, ಪಾಲಿಸಿ, ನಡೆನುಡಿ ವಿದ್ಯೆಗಳನ್ನು ಕಲಿಸಿ, ತನ್ನ ಶ್ರೇಯೋಭಿವೃದ್ಧಿಗಾಗಿ ಪ್ರೈತಿತ್ತ ಮಾತಾಪಿತೃಗಳಿಗೆ ಕೃತಜ್ಞತೆಯನ್ನು ಸಲ್ಲಿಸುವುದು. ಈ ಕಾರಣದಿಂದಲೇ ಪೂಜಾವಿಧಿಯಲ್ಲಿ ಮೊದಲು ಮಾತಾಪಿತೃಗಳ ಪೂಜೆಯನ್ನು ಮಂತ್ರ-ಪೂರ್ವಕವಾಗಿ ಸಲ್ಲಿಸಬೇಕಾದುದನ್ನು ತಿಳಿಯಹೇಳಿದೆ. ಈ ವಿಷಯವನ್ನು ಉಪನಿಷತ್ತು 'ಮಾತೃದೇವೋ ಭವ, ಪಿತೃದೇವೋ ಭವ' ಅಂದರೆ "ಹೆತ್ತ ತಾಯಿತಂದೆಯರನ್ನು ದೇವತೆಗಳೆಂದೇ ಭಾವಿಸಿ ಅವರಿಗೆ ಪ್ರಥಮಪೂಜೆಯನ್ನು ಸಲ್ಲಿಸು" ಎಂದು ಒತ್ತಿ ಹೇಳಿದೆ. ಆದರೆ ಅವರೂ ಮರ್ತ್ಯರಾದುದರಿಂದ ಅವರ ಸಾನ್ನಿಧ್ಯವು ಸದಾ ಯಾರಿಗೂ ದೊರಕದು. ಏಕೆಂದರೆ ಅವರು ದೇಹಧಾರಿಗಳಾದುದರಿಂದ ಮರ್ತ್ಯರು. ಇಂತಹ ತಂದೆತಾಯಿಗಳ ಪೀಳಿಗೆಯಲ್ಲಿ ಹಿಂದು ಹಿಂದಕ್ಕೇ ಸರಿದುದೇ ಆದರೆ ಇಡೀ ವಿಶ್ವಕ್ಕೇ ಕಾರಣಕರ್ತೃವೆನಿಸಿದ ಒಂದು

ನಿತ್ಯವಸ್ತುವಿದ್ದೇ ಇರಬೇಕೆಂಬುದು ವಿವೇಚಿಸಬಲ್ಲ ಮಾನವನಿಗೆ ಭಾಸವಾಗುತ್ತದೆ. ಇಂತಹ ಅಚಿಂತ್ಯವಸ್ತುವಿನ ತತ್ವವನ್ನು ಮಹರ್ಷಿಗಳು ತಮ್ಮ ತಪಸ್ಸು ಮತ್ತು ಯೋಗಬಲದಿಂದ ತಿಳಿದು, ಅದರ ಅಸ್ತಿತ್ವವನ್ನು ಅನುಭವಿಸಿ, ತಮ್ಮ ಅನುಭವಿಕ ವಚನಗಳನ್ನು ಉಪನಿಷದ್ವಾಕ್ಯಗಳ ಮೂಲಕ ಹೊರಗೆಡಹಿರುತ್ತಾರೆ. ಅವುಗಳ ಬಗೆ ಹೀಗಿದೆ.

"ತದೇವ ಸೌಮ್ಯ! ಇದಮಗ್ರ ಆಸೀತ್ * ಏಕಮೇವ ಅದ್ವಿತೀಯಂ ಬ್ರಹ್ಮ * ತತ್ ಸೃಷ್ಟ್ವಾ, ತದೇವಾನುಪ್ರಾವಿಶತ್ * ಅಹಂ ಬಹುಸ್ಯಾಮಿತಿ * ತಸ್ಮಾತ್ ಏತಸ್ಮಾತ್ ಆಕಾಶಃ ಸಂಭೂತಃ * ಆಕಾಶಾತ್ ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅದ್ಭ್ಯಃ ಪೃಥಿವೀ, ಪೃಥಿವ್ಯಾಃ ಓಷಧಯಃ, ಓಷಧೀಭ್ಯೋಽನ್ನಂ, ಅನ್ನಾತ್ ಪುರುಷಃ * ಸ ವಾ ಏಷ ಪುರುಷೋಽನ್ನ-ರಸಮಯಃ * *"

ಎಂಬಂತೆ ತತ್ವವೇತ್ತನಾದ ಗುರುವು ಶಿಷ್ಯನನ್ನು ಕುರಿತು, "'ಸೌಮ್ಯ! ಎಲ್ಲಕ್ಕಿಂತಲೂ ಮೊದಲಿದ್ದುದು ಆ ಬ್ರಹ್ಮವಸ್ತುವೊಂದೇ ಹೌದು. ಅದನ್ನು ಬಿಟ್ಟು ಎರಡನೆಯದೆಂಬುದೇ ಇರದು. ಆ ಬ್ರಹ್ಮವೇ ಇಂದ್ರಿಯಗೋಚರವಾದ ಈ ವಿಶ್ವವನ್ನು ತನ್ನ ಸಂಕಲ್ಪದಿಂದ ಹೊರತಂದುದು. ಆ ಬ್ರಹ್ಮವು ಈ ವಿಶ್ವವನ್ನು ಸೃಷ್ಟಿಸಿ ಅವೆಲ್ಲದರಲ್ಲಿಯೂ ತಾನೇ ಹರಡಿಕೊಂಡಿತು. ಆದುದರಿಂದಲೇ 'ಸರ್ವಂ ಖಲ್ವಿದಂ ಬ್ರಹ್ಮ'–ಅಂದರೆ ಎಲ್ಲವೂ ಬ್ರಹ್ಮಮಯವೇ ಹೌದು. ತಾನೊಬ್ಬನೇ ಆಗಿದ್ದರೂ ತಾನು ಅನೇಕ ಬಗೆಯಿಂದ ಬೆಳಗಬೇಕು" ಎಂಬ ಬ್ರಹ್ಮವಸ್ತುವಿನ ಸಂಕಲ್ಪವೇ ಇದಕ್ಕೆ ಕಾರಣ. ಈ ವಿಶ್ವದ ಸೃಷ್ಟಿ ಹೀಗಿದೆ:– ಆ ಬ್ರಹ್ಮವು ಸಂಕಲ್ಪಿಸಿದ ಒಡನೆಯೇ ಮೊತ್ತಮೊದಲು ಅದು ಆಕಾಶಸ್ವರೂಪವಾಯಿತು. ಆ ಮೂಲಕ ವಾಯುರೂಪ, ಅದರಿಂದ ತೇಜಸ್ಸು ಅಥವಾ ಅಗ್ನಿ, ಆ ಅಗ್ನಿಯಿಂದಲೇ ಜಲರೂಪದ ಉತ್ಪತ್ತಿ, ತನ್ಮೂಲಕ ಈ ಭೂಮಿ. ಇವುಗಳು ಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರಸ, ಮತ್ತು ಗಂಧಗಳೆಂಬ ತಮ್ಮತಮ್ಮ ಪ್ರಧಾನ ಗುಣಗಳನ್ನು ಪಡೆದ ಪಂಚಮಹಾಭೂತಗಳು ಉದ್ಭವಿಸಿದುವು. ಭೂಮಿಯು ಗಿಡಮರಬಳ್ಳಿಗಳಿಂದ ಕೂಡಿದ ಓಷಧಿಗಳಿಗೆ ಎಡೆಗೊಟ್ಟಿತು. ಈ ಓಷಧಿಗಳು ಜೀವರಾಶಿಗಳಿಗೆ ಅತ್ಯವಶ್ಯಕವೆನಿಸಿದ ಆಹಾರಸಾಮಗ್ರಿಗಳನ್ನೊದಗಿಸಿದುವು. ಜೀವಿವರ್ಗಗಳಲ್ಲಿ ಅತ್ಯುಚ್ಚವೆನಿಸಿದ ಮಾನವನ ಉತ್ಪತ್ತಿ, ಬೆಳೆಸು,

ಇರವು, ಅರಿವು ಇವೆಲ್ಲವೂ ಅದರಿಂದಲೇ ಹೌದು. ಈ ಕಾರಣದಿಂದ ಅನ್ನ-ರಸಮಯನೆನಿಸಿದ ಪುರುಷನು (ಮಾನವನು) ತನ್ನ ಶ್ರೇಯಸ್ಸಿಗೆಲ್ಲ ಕಾರಣ-ಕರ್ತನೆನಿಸಿದ ಪರಬ್ರಹ್ಮವಸ್ತುವಿಗೆ ತನ್ನ ಕೃತಜ್ಞತೆಯನ್ನು ಅಂದರೆ ಪೂಜೆಯನ್ನು ಸಲ್ಲಿಸಬೇಕಾದುದು ಅತ್ಯವಶ್ಯಕ ಮತ್ತು ಅವನ ಕರ್ತವ್ಯಕರ್ಮ.

ಆದರೆ ಆ ಬ್ರಹ್ಮ ಸ್ವರೂಪವೆಂಥದು? ಅದಕ್ಕೆ ಮಾನವನು ತನ್ನ ಕೃತಜ್ಞತೆಯನ್ನು ತೋರುವ ಬಗೆ ಹೇಗೆ? ಎಂಬ ಪ್ರಶ್ನೆಗಳು ತಾವಾಗಿಯೇ ಉದಿಸುವುವು. ಈ ಬ್ರಹ್ಮವಸ್ತುವಿನ ಸ್ವರೂಪವನ್ನು ಕುರಿತು ಶ್ರೀ ಶ್ರೀ ಆದಿಶಂಕರಾಚಾರ್ಯರು ತಾವು ರಚಿಸಿದ 'ಆತ್ಮಬೋಧ' ಎಂಬ ಪ್ರಕರಣ-ಗ್ರಂಥದಲ್ಲಿ ಹೀಗೆಂದು ವರ್ಣಿಸಿರುತ್ತಾರೆ:

ಶ್ಲೋ || ಯಲ್ಲಾಭಾತ್ ನಾಪರೋ ಲಾಭೋ, * ಯತ್ಸುಖಾತ್
ನಾಪರಂ ಸುಖಮ್, |
ಯಜ್ಞಾನಾತ್ ನಾಪರಂ ಜ್ಞಾನಂ, * ತತ್ ಬ್ರಹ್ಮೇತ್ಯವ-
ಧಾರಯೇತ್ ||೧||

ಯತ್ ದೃಷ್ಟ್ವಾ ನಾಪರಂ ದೃಶ್ಯಂ, * ಯತ್ ಭೂತ್ವಾ ನ
ಪುನರ್ಭವೇತ್, |
ಯತ್ ಜ್ಞಾತ್ವಾ ನಾಪರಂ ಜ್ಞೇಯಂ, * ತತ್
ಬ್ರಹ್ಮೇತ್ಯವಧಾರಯೇತ್ ||೨||

ತಿರ್ಯಗೂರ್ಧ್ವ ಮಧಃ ಪೂರ್ಣಂ * ಸಚ್ಚಿದಾನಂದ ಮದ್ವಯಮ್ |
ಅನಂತಂ ನಿತ್ಯಮೇಕಂ ಯತ್ *
ತದ್ಬ್ರಹ್ಮೇತ್ಯವಧಾರಯೇತ್ ||೩||

ಅತತ್ ವ್ಯಾವೃತ್ತಿರೂಪೇಣ * ವೇದಾಂತೈಃ ಲಕ್ಷ್ಯತೇಽವ್ಯಯಮ್ |
ಅಖಂಡಾನಂದ ಮೇಕಂ ಯತ್ * ತತ್
ಬ್ರಹ್ಮೇತ್ಯವಧಾರಯೇತ್ ||೪||

ಅನಣ್ವಸ್ಥೂಲ ಮಹ್ರಸ್ವಂ * ಅದೀರ್ಘ ಮಜ ಮವ್ಯಯಮ್ |
ಅರೂಪಗುಣವರ್ಣಾಖ್ಯಂ * ತತ್
ಬ್ರಹ್ಮೇತ್ಯವಧಾರಯೇತ್ ||೫||

ಶ್ಲೋ || ಯದ್ಭಾಸಾ ಭಾಸ್ಯತೇಽರ್ಕಾದಿ * ಭಾಸ್ಯೈರ್ಯತ್ತು ನ ಭಾಸ್ಯತೇ |
ಯೇನ ಸರ್ವಮಿದಂ ಭಾತಿ * ತತ್
ಬ್ರಹ್ಮೇತ್ಯವಧಾರಯೇತ್ ||೬||

ದೃಶ್ಯತೇ ಶ್ರೂಯತೇ ಯದ್ಯತ್ * ಬ್ರಹ್ಮಣೋಽನ್ಯತ್ ನ ವಿದ್ಯತೇ|
ತತ್ವಜ್ಞಾನಾತ್ ಚ ತತ್ ಬ್ರಹ್ಮ * ಸತ್ ಚಿತ್
ಆನಂದ ಮದ್ವಯಮ್ ||೭||

ಎಂಬಂತೆ

(1) ಯಾವುದನ್ನು ಪಡೆಯುವದಕ್ಕಿಂತ ಹೆಚ್ಚಿನ ಲಾಭ ಬೇರಿರದೋ, ಯಾವುದರ ಸುಖಾನುಭವಕ್ಕಿಂತಲೂ ಹೆಚ್ಚಿನ ಸುಖ ಮತ್ತೊಂದಿಲ್ಲವೋ, ಮತ್ತು ಯಾವುದರ ಜ್ಞಾನಕ್ಕಿಂತಲೂ ಮಿಗಿಲಾದುದು ಬೇರಿಲ್ಲವೋ, ಅದನ್ನೇ ಬ್ರಹ್ಮವೆಂದು ತಿಳಿಯಬೇಕು.

(2) ಯಾವುದನ್ನು ಕಂಡ ಬಳಿಕ ಬೇರೆ ಕಾಣಬೇಕಾದುದು ಮತ್ತೊಂದಿಲ್ಲವೋ, ಯಾವುದು ತನ್ನ ಸ್ವರೂಪವೇ ಹೌದು ಎಂಬ ಜ್ಞಾನವುದಿಸಿದ ಬಳಿಕ ಮತ್ತೆ ತನಗೆ ಹುಟ್ಟೆಂಬುದಿಲ್ಲವೋ, ಮತ್ತು ಯಾವುದರ ಅರಿವಾದ ಬಳಿಕ ಮತ್ತೊಂದರ ಅರಿವನ್ನು ಪಡೆಯಬೇಕಾದುದಿಲ್ಲವೋ ಅದನ್ನೇ ಬ್ರಹ್ಮವಸ್ತು-ವೆಂದರಿಯಬೇಕು.

(3) ಅಡ್ಡಡ್ಡಲಾಗಿ, ಮೇಲೆ, ಕೆಳಗೆ ಹೀಗೆ ಎಲ್ಲೆಡೆಯಲ್ಲಿಯೂ ತುಂಬಿಕೊಂಡು ಸಚ್ಚಿದಾನಂದಸ್ವರೂಪವೂ, ಅದ್ವಿತೀಯವೂ, ನಿತ್ಯವೂ, ಏಕಮಾತ್ರವೂ ಆಗಿರುವುದು ಯಾವುದೋ ಅದನ್ನೇ ಬ್ರಹ್ಮವಸ್ತುವೆಂದು ತಿಳಿಯಬೇಕು.

(4) ಅದಲ್ಲದ್ದನ್ನು ತಿರಸ್ಕರಿಸುವ ಬಗೆಯಿಂದ ಅಂದರೆ 'ನೇತಿನೇತಿ' ಎಂಬ ಶ್ರುತಿವಚನಗಳಿಂದ, ಅಚ್ಚಳಿಯದೆಯೂ, ಅಖಂಡಾನಂದ ಸ್ವರೂಪವೂ ಆಗಿರುವ ಅಲ್ಲದೆ ಅದೊಂದೇ ಆದ ಯಾವುದನ್ನು ಲಕ್ಷಣೆಯಿಂದ ಮಾತ್ರ ತಿಳಿಸಲು ಶಕ್ಯವೋ ಅದನ್ನೇ ಬ್ರಹ್ಮವಸ್ತುವೆಂದರಿಯಬೇಕು.

(5) ಯಾವುದು ಅಣುವೂ ಅಲ್ಲ, ಸ್ಥೂಲವೂ ಅಲ್ಲ, ಮೋಟಕೂ ಅಲ್ಲ, ನೀಳವೂ ಅಲ್ಲ, ಅಲ್ಲದೆ ಯಾವುದಕ್ಕೆ ಹುಟ್ಟುಸಾವುಗಳೆಂಬುದಿಲ್ಲವೋ ಮತ್ತು

ರೂಪ, ಗುಣ, ಬಣ್ಣ, ಹೆಸರು ಇವೊಂದೂ ಇಲ್ಲವೋ ಅಂತಹ ವಸ್ತುವೇ ಬ್ರಹ್ಮವಸ್ತು ಎಂದು ತಿಳಿಯಬೇಕು.

(6) ಯಾವುದರ ಪ್ರಕಾಶದಿಂದಲೇ ಸೂರ್ಯನೇ ಮೊದಲಾದ ಜ್ಯೋತಿರ್ಗಣಗಳು ಬೆಳಗುವುವೋ, ಅಲ್ಲದೆ ಇಂತಹ ಜ್ಯೋತಿಗಳಿಂದ ಯಾವುದನ್ನು ಬೆಳಗಿಸಲು ಸಾಧ್ಯವಿಲ್ಲವೋ ಮತ್ತು ಯಾವುದರಿಂದ ಇಡೀ ವಿಶ್ವವೇ ಹೊಳೆಯುತ್ತಿರುವುದೋ ಅದೇ ಬ್ರಹ್ಮವಸ್ತು.

(7) ಹೆಚ್ಚೇಕೆ! ಒಟ್ಟನಲ್ಲಿ ಕಣ್ಣಿಗೆ ಕಂಡುಬರುವ, ಕಿವಿಗೆ ಕೇಳಿಬರುವ, ಅಂದರೆ ನಮ್ಮ ಬಹಿರಿಂದ್ರಿಯ ಅಂತರಿಂದ್ರಿಯಗಳಿಗೆ ಗೋಚರಿಸುವ ವಸ್ತುಗಳೆಲ್ಲವೂ ಆ ಬ್ರಹ್ಮಸ್ವರೂಪವೇ ವಿನಾ ಅವು ಅದರಿಂದ ಬೇರ್ಪಟ್ಟಿಲ್ಲ. ತಾತ್ವಿಕ ದೃಷ್ಟಿಯಿಂದ ನೋಡಿದರೆ ಆ ಬ್ರಹ್ಮವೇ ಸತ್, ಚಿತ್, ಮತ್ತು ಆನಂದಸ್ವರೂಪವೂ ಹೌದು, ಅದ್ವಿತೀಯವೂ ಹೌದು. ಅಲ್ಲದೆ ಆ ಬ್ರಹ್ಮವಸ್ತುವನ್ನು ನಿರ್ಗುಣ, ನಿಷ್ಕ್ರಿಯ, ನಿತ್ಯ, ನಿರ್ವಿಕಲ್ಪ, ನಿರಂಜನ, ನಿರಾಕಾರ, ನಿರ್ವಿಕಾರ, ನಿತ್ಯಮುಕ್ತ ಮತ್ತು ನಿರ್ಮಲ ಎಂಬ ಒಂಭತ್ತು ಬಗೆಗಳಿಂದ ವರ್ಣಿಸಿದೆ. ಇಂತಹ ಬ್ರಹ್ಮವಸ್ತುವು ತನ್ನ ಹುಟ್ಟಿಗೆ, ತನ್ನಿರವಿಗೆ, ತನ್ನರಿವಿಗೆ, ತನ್ನ ಬೆಳಸಿಗೆ, ತನ್ನ ಶ್ರೇಯಸ್ಸಿಗೆ ಮತ್ತು ತನ್ನ ಸುಖಸಂತೋಷಗಳಿಗೆ ಕಾರಣನಾಗಿರುವುದು ನಿಜವಾದರೂ ಇಂದ್ರಿಯಗಳಿಗೆ ಗೋಚರವಾಗದ, ಊಹಿಸಲೂ ಸಾಧ್ಯವಿರದ ಅಂತಹ ಬ್ರಹ್ಮವಸ್ತುವನ್ನು ಆರಾಧಿಸುವ ಪರಿ ಹೇಗೆ? ನಿರ್ಗುಣ ನಿರಾಕಾರನೆನಿಸಿದ ಇಂತಹುದನ್ನು ಆರಾಧಿಸಿ ಸಿದ್ಧಿಪಡೆದವರುಂಟೆ? ಇಂತಹ ಆರಾಧನೆಯ ಕ್ರಮಕ್ಕೆ ಏನೆಂದು ಹೆಸರು? ಜನಸಾಮಾನ್ಯಕ್ಕೆ ಇಂತಹ ಆರಾಧನೆಯು ಸಾಧ್ಯವೆ? ಎಂಬ ಪ್ರಶ್ನಿಮಾಲೆಗೆ ಉತ್ತರವು ಈ ಮುಂದಿನಂತಿದೆ: ನಿರ್ಗುಣಬ್ರಹ್ಮನನ್ನು ಆರಾಧಿಸುವ ಬಗೆಗೆ **ನಿರ್ಗುಣಾರಾಧನೆ** ಎಂಬ ಹೆಸರು. ಜನಸಾಮಾನ್ಯಕ್ಕೆ ಈ ವಿಧವಾದ ಆರಾಧನೆಯು ಕಷ್ಟಸಾಧ್ಯವಾದರೂ ಮಹಾಮೇಧಾವಿಗಳೆನಿಸಿದ ಯೋಗಿಗಳು ತಮ್ಮ ಇಂದ್ರಿಯವ್ಯಾಪಾರಗಳನ್ನೆಲ್ಲ ತಡೆಹಿಡಿದು, ಮನಸ್ಸನ್ನು ಸಂಕಲ್ಪಶೂನ್ಯವನ್ನಾಗಿ ಮಾಡಿ, ಅದನ್ನು ಒಂದೆಡೆಯಲ್ಲಿ ನಿಲ್ಲಿಸಿ, ಅಂದರೆ ನಿರ್ವಿಕಲ್ಪಸಮಾಧಿಯ ಮೂಲಕ ಸಚ್ಚಿದಾನಂದಸ್ವರೂಪವೆನಿಸಿದ ಆ ಪರಮಾತ್ಮನನ್ನು ಸಾಕ್ಷಾತ್ಕರಿಸಿ, ನಿತ್ಯಾನಂದಸುಖವನ್ನನುಭವಿಸುತ್ತ ಇಂತಹ

ನಿರ್ಗುಣಾರಾಧನೆಯನ್ನು ಪರಮಾತ್ಮನಿಗೆ ಸಲ್ಲಿಸಿದವರಿದ್ದಾರೆ. ಇಂತಹ ಬ್ರಹ್ಮಜ್ಞಾನಿಗಳು ಹಲವಾರು ಮಂದಿ ಇದ್ದರು ಮಾತ್ರವಲ್ಲದೆ ತಮ್ಮ ಅನುಭವವೇದ್ಯವಾದ ವಿಷಯಗಳನ್ನು ಉಪನಿಷದ್ವಾಕ್ಯಗಳ ಮೂಲಕ ಲೋಕಾನುಗ್ರಹಕ್ಕಾಗಿ ತಿಳಿಯಹೇಳಿರುತ್ತಾರೆ. ಇವರೇ ಮಹರ್ಷಿಗಳು ಮತ್ತು ಬ್ರಹ್ಮರ್ಷಿಗಳೆಂದೆನಿಸಿದವರು. ಅವರೇ ನಮ್ಮ ಪೂರ್ವಿಕರಾದ ಹಿರಿಯರು. ಅವರ ಪೀಳಿಗೆಯಲ್ಲಿಯೇ ಬಂದವರು ನಾವು. ಅವರು ಅನುಸರಿಸಿದ ಮಾರ್ಗ, ಅಂದರೆ ನಿರ್ಗುಣಾರಾಧನೆಯ ಮೂಲಕ ಪರಬ್ರಹ್ಮನ ಆರಾಧನೆ ಮಾಡುವುದು, ಜನಸಾಮಾನ್ಯಕ್ಕೆ ಬಹು ಕಷ್ಟಸಾಧ್ಯವೆಂದರಿತು, ಮಾನವರನ್ನು ಹೇಗಾದರೂ ಮಾಡಿ ಉದ್ಧರಿಸಬೇಕೆಂಬ ಘನೋದ್ದೇಶದಿಂದ ಈ ಮಹರ್ಷಿಗಳು **ಸಗುಣಾರಾಧನೆಯ** ಕ್ರಮವನ್ನೂ ತಿಳಿಯಹೇಳಿದ್ದಾರಲ್ಲದೆ ಈ **ಮಾರ್ಗವನ್ನು** ಅನುಸರಿಸಿದವರೂ ಕಡೆಯ ಗುರಿಯನ್ನು ಮುಟ್ಟಲು ಸಾಧ್ಯ ಎಂಬುದನ್ನು ಸೂಚಿಸಿರುತ್ತಾರೆ. ಸಗುಣಾರಾಧನೆಯ ಕ್ರಮ ಈ ಮುಂದಿನಂತಿದೆ:

ಅತೀಂದ್ರಿಯವಸ್ತುವೆನಿಸಿದ ಆ ಪರಬ್ರಹ್ಮನ ಆರಾಧನೆಯನ್ನು ಆ ಬ್ರಹ್ಮನ ಸಂಕಲ್ಪದಿಂದ ಹೊರಬಂದ ಮತ್ತು ಇಂದ್ರಿಯಗೋಚರವಾಗುವ ವಸ್ತುಗಳನ್ನು ಆರಾಧಿಸುವುದರ ಮೂಲಕ ಸಾಧಿಸಬಹುದು. ಹೇಗೆಂಬುದು ಶಾಸ್ತ್ರಸಮ್ಮತ, ಬುದ್ಧಿಗ್ರಾಹ್ಯ ಮತ್ತು ಸಹೇತುಕ. ಉದಹರಿಸಬೇಕೆಂದರೆ: ಬ್ರಹ್ಮವಸ್ತುವಿನಿಂದಲೇ ಆಕಾಶ, ವಾಯು, ಅಗ್ನಿ, ಜಲ ಮತ್ತು ಭೂಮಿ ಗಳೆಂಬ ಮಹಾಪಂಚಭೂತಗಳು ಉತ್ಪತ್ತಿಯಾದವು ಎಂಬ ವಿಷಯವನ್ನು ಉಪನಿಷದ್ವಾಕ್ಯಗಳು ತಿಳಿಸಿವೆ ಎಂಬುದನ್ನು ಈ ಹಿಂದೆಯೇ ಸೂಚಿಸಿದೆ. ಈ ಕಾರಣ ಆ ಪಂಚಭೂತಗಳನ್ನೇ ನಿಷ್ಠೆಯಿಂದ ಆರಾಧಿಸಿದಲ್ಲಿ ಅದು ಆ ನಿರ್ಗುಣಪರಬ್ರಹ್ಮನ ಆರಾಧನೆಯೇ ಆಗುತ್ತದೆ. ಇವೆಲ್ಲವೂ ಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ, ಹೀಗೆ ತಮ್ಮತಮ್ಮ ಪ್ರಧಾನ ಗುಣಗಳಿಂದ ಕೂಡಿ ಮೆರೆಯುವುದರಿಂದ ಅವುಗಳ ಪೂಜೆಯು ಸಗುಣ ಬ್ರಹ್ಮನ ಪೂಜೆಯಾದಂತೆಯೇ ಹೌದು. ಹೇಗೆಂದರೆ ಮಕ್ಕಳಲ್ಲಿ ಪ್ರೇಮವನ್ನು ವ್ಯಕ್ತಪಡಿಸಿದಲ್ಲಿ ಅವರನ್ನು ಹೆತ್ತ ತಾಯಿಯ ಸಂತೋಷಕ್ಕೆ ಪಾತ್ರವಾಗುವುದು ಎಲ್ಲರಿಗೂ ತಿಳಿದ ವಿಷಯ. ಅದರಂತೆಯೇ ಪರಬ್ರಹ್ಮಜನ್ಯವಾದ ಮತ್ತು ಬ್ರಹ್ಮಮಯವಾದ ವಸ್ತುಗಳನ್ನು ಆರಾಧಿಸಿದಲ್ಲಿ ಅದೇ ಆ ನಿರ್ಗುಣಬ್ರಹ್ಮನಿಗೆ

ಸಲ್ಲುವ ಆರಾಧನೆ. ಈ ರಹಸ್ಯವನ್ನರಿತೇ ಶ್ರುತಿಗಳಲ್ಲಿನ ಕರ್ಮಕಾಂಡದಲ್ಲಿ ಪಂಚಮಹಾಭೂತಗಳಲ್ಲಿನ ಒಂದೊಂದನ್ನೂ ಆರಾಧಿಸತಕ್ಕ ಮಂತ್ರಗಳನ್ನು ಎತ್ತಿಹೇಳಿದೆ. ಇಷ್ಟೇ ಅಲ್ಲದೆ ಈ ಪ್ರಕೃತಿಯಲ್ಲಿ ಕಂಡುಬರುವ ಪರ್ವತ, ಸಾಗರ, ನದೀ, ವೃಕ್ಷ, ಪರ್ಜನ್ಯ (ಮೇಘ), ಇವೇ ಮೊದಲಾದುವನ್ನು ಮಂತ್ರವತ್ತಾಗಿ ಸ್ತುತಿಸುವುದೂ ಉಂಟು. ಏಕೆಂದರೆ ಇವೆಲ್ಲವೂ ಲೋಕ ಮಂಗಳಕ್ಕಾಗಿಯೇ ಏರ್ಪಟ್ಟಿರುವುವು ಎಂಬ ಮಾತು ಸತ್ಯ. ಬರಬರುತ್ತ ಈ ಇಂದ್ರಿಯಗೋಚರವಾದ ವಸ್ತುಗಳ ಅಭಿಮಾನದೇವತೆಗಳನ್ನು ಕಲ್ಪಿಸಿ, ಅವನ್ನು ವಿವಿಧ ನಾಮಗಳಿಂದ ಆರಾಧಿಸುವುದೂ ಆಚರಣೆಗೆ ಬಂದಿತು. ಇವುಗಳ ಜೊತೆಗೆ ಈ ಲೋಕಕ್ಕೆ ಚೈತನ್ಯದಾಯಕನಾದ ಸೂರ್ಯದೇವನನ್ನೂ, ಚಂದ್ರ ನಕ್ಷತ್ರಗ್ರಹಾದಿಗಳಿಗೂ ಮಾನವನ ಜೀವನಕ್ಕೂ ಸಂಬಂಧವನ್ನು ಕಲ್ಪಿಸಿ ಅವುಗಳನ್ನು ಪೂಜಿಸುವ ಆವಶ್ಯಕತೆಯನ್ನೂ, ಅದರ ಬಗೆಯನ್ನೂ ಶ್ರುತಿಗಳು ಬೋಧಿಸುತ್ತಾ ಬಂದಿವೆ. ಮಹಾಮೇಧಾವಿಗಳೂ ತ್ರಿಕಾಲಜ್ಞರೂ ಎನಿಸಿದ ಮಹರ್ಷಿಗಳು ಮಾನವಕುಲವನ್ನುದ್ಧರಿಸಲೋಸುಗ, ಸಗುಣಾರಾಧನೆಯನ್ನು ಕಲ್ಪಿಸಿ ಆ ಮೂಲಕ ನಿರ್ಗುಣಾರಾಧನೆಯ ಫಲವನ್ನು ಸಾಧಿಸಬಹುದೆಂದು ಘೋಷಿಸಿದ್ದಾರೆ. ಇದಕ್ಕಾಗಿಯೇ ಅವರು ' ಪರಬ್ರಹ್ಮನು ನಿರ್ಗುಣ ಮತ್ತು ನಿರಾಕಾರನೆನಿಸಿದ್ದರೂ ಅದಕ್ಕೆ ಸತ್ವರಜಸ್ತಮೋಗುಣಗಳನ್ನು ಅಳವಡಿಸಿ, ಆಯಾ ಆಕಾರ ಹೆಸರುಗಳನ್ನು ಬೇರೆಬೇರೆ ವ್ಯಕ್ತಿಗಳಿಗೆ ವಿಂಗಡಿಸಿಕೊಟ್ಟು, ಆ ಮೂಲಕ ಸೃಷ್ಟಿಸ್ಥಿತಿಲಯಾದಿ ಕಾರ್ಯಗಳನ್ನು ಅವರಿಗೆ ಹಂಚಿಕೊಟ್ಟಿದ್ದಾರೆ. ಆ ವ್ಯಕ್ತಿಗಳಿಗೆ ಕ್ರಮವಾಗಿ ಬ್ರಹ್ಮವಿಷ್ಣುಮಹೇಶ್ವರರೆಂಬ ಹೆಸರುಗಳಿಂದ ತ್ರಿಮೂರ್ತಿಗಳ ಕಲ್ಪನೆ ಮಾಡಿರುತ್ತಾರೆ. ಇದರಿಂದ ಮಾನವನು ತನ್ನ ಉತ್ಪತ್ತಿಗೆ ಆಗುಹೋಗುಗಳಿಗೆ ಕಾರಣರಾದ ಈ ದೇವತೆಗಳ ಪ್ರತೀಕವೇ ತಾನೆಂದು ಭಾವಿಸಿ, ತನ್ನ ಆಕಾರವನ್ನೇ ಅವುಗಳಿಗೆ ಅಳವಡಿಸಿರುತ್ತಾನೆ. ಆದರೆ ಆ ದೇವತೆಗಳು ಜ್ಞಾನದಲ್ಲಿ, ಮಹತ್ತಿನಲ್ಲಿ, ಗುಣದಲ್ಲಿ, ಶಕ್ತಿಯಲ್ಲಿ, ನಡೆಯಲ್ಲಿ, ನುಡಿಯಲ್ಲಿ, ತನಗಿಂತಲೂ ಮೇಲ್ಮಟ್ಟದವರೆಂದು ಭಾವಿಸಿ, ತನ್ನ ಪೂಜೆಗೆ ಅವರು ಅರ್ಹರೆಂದು ಕಲ್ಪಿಸಿರುತ್ತಾನೆ ಮಾತ್ರವಲ್ಲದೆ ಶಾರೀರಕ ರಚನೆಯಲ್ಲಿಯೂ ಕೂಡ ಅವರಿಗೆ ವೈಶಿಷ್ಟ್ಯವನ್ನು ಕಲ್ಪಿಸಿರುತ್ತಾನೆ. ಉದಾಹರಣೆಗೆ ಬ್ರಹ್ಮನಿಗೆ ನಾಲ್ಕು ಮುಖಗಳನ್ನೂ, ವಿಷ್ಣುವಿಗೆ ನಾಲ್ಕು ಹಸ್ತಗಳನ್ನೂ

ಮತ್ತು ಈಶ್ವರನಿಗೆ ಐದು ಮುಖಗಳನ್ನೂ ಹತ್ತು ಕೈಗಳನ್ನೂ ಕಲ್ಪಿಸಿ, ಆ ಬಗೆಯಿಂದ ಆ ದೇವತೆಗಳೆಲ್ಲರೂ ತನ್ನ ಆರಾಧನೆಗೆ ತಕ್ಕವರೆಂದೂ, ಅವರನ್ನು ಪೂಜೆಯ ಮೂಲಕ ಒಲಿಸಿದರೆ ತನ್ನ ಮನದೆಣಿಕೆ ನೆರವೇರುವುದೆಂದೂ ಭಾವಿಸಿರುತ್ತಾನೆ. ಇಷ್ಟೇ ಅಲ್ಲದೆ ಅವರಿಗೆ ಶಾರದೆ, ಲಕ್ಷ್ಮೀ, ಮತ್ತು ಪಾರ್ವತೀ, ಎಂಬ ಹೆಣ್ಣು ದೇವತೆಗಳನ್ನು ಪತ್ನಿಯರನ್ನಾಗಿ ಕಲ್ಪಿಸಿ ಅವರನ್ನು ಕ್ರಮವಾಗಿ ವಿದ್ಯೆ, ಐಶ್ವರ್ಯ, ಮತ್ತು ಮಂಗಳದೇವಿಯರನ್ನಾಗಿ ಮಾಡಿ ಅವರಿಗೆ ಸಾಂಸಾರಿಕ ಜೀವನವನ್ನೂ ಅನುಗೊಳಿಸಿರುತ್ತಾನೆ. ಈ ದಂಪತಿವರ್ಗಗಳನ್ನು ಆರಾಧಿಸಿದ್ದರಿಂದ ಅವರ ಅನುಗ್ರಹಕ್ಕೆ ತಾನು ಪಾತ್ರನಾಗಿ ತನ್ನ ಇಷ್ಟಾರ್ಥಗಳನ್ನು ಅವರಿಂದ ಪಡೆಯಬಹುದೆಂದು ಭಾವಿಸಿರುತ್ತಾನೆ. ಇಷ್ಟಕ್ಕೇ ತೃಪ್ತನಾಗದೆ ಮಾನವನು ಆ ದೇವತೆಗಳಿಗೆ ಮಕ್ಕಳನ್ನೂ ಕಲ್ಪಿಸಿ ಅವರನ್ನೂ ಪೂಜಾರ್ಹರನ್ನಾಗಿ ಮಾಡಿರುತ್ತಾನೆ. ಉದಾಹರಣೆಗೆ ವಿಷ್ಣುದೇವನಿಗೆ ಸೌಂದರ್ಯನಿಧಿಯಾದ ಕಾಮದೇವನನ್ನೂ, ವಿಘ್ನನಾಶಕ ದೇವತೆಯೆನಿಸಿದ ಗಣಪತಿಗೆ ಗಜಮುಖವನ್ನೂ, ಕುಮಾರಸ್ವಾಮಿಗೆ ಆರು ಮುಖಗಳನ್ನೂ ಕಲ್ಪಿಸಿ ತಮ್ಮ ಇಷ್ಟಾರ್ಥಗಳನ್ನು ಸಲ್ಲಿಸಬಲ್ಲ ಈ ದೇವತೆಗಳನ್ನು ಪೂಜಾರ್ಹರೆಂದೂ ಭಾವಿಸಿ ಇಂತಹ ಇಬ್ಬರು ಮಕ್ಕಳನ್ನು ಮಹೇಶ್ವರನಿಗೂ ಕಲ್ಪಿಸಿರುತ್ತಾನೆ. ಇದರಂತೆಯೇ ಇಂದ್ರಾಗ್ನಿಗಳೇ ಮೊದಲಾದವರನ್ನು ದಿಕ್ಪಾಲಕರನ್ನಾಗಿಯೂ, ಸೂರ್ಯಚಂದ್ರಾದಿ ನವಗ್ರಹಗಳನ್ನು ಮಾನವನ ಆಗುಹೋಗುಗಳಿಗೆ ಅಧಿದೇವತೆಗಳನ್ನಾಗಿಯೂ ಕಲ್ಪಿಸಿ ಅವರನ್ನೂ ಆರಾಧ್ಯದೇವತೆಗಳನ್ನಾಗಿ ಮಾಡಿರುತ್ತಾನೆ. ಇವುಗಳನ್ನು ವಿಧಿಗನುಸಾರವಾಗಿ ಪೂಜಿಸಿದ್ದರಿಂದ ಮಾನವನು ತನ್ನ ಇಷ್ಟಾರ್ಥವನ್ನು ಗಳಿಸಬಹುದೆಂಬುದೇ ಮಾನವನ ಸಗುಣಾರಾಧನೆಯ ಕಲ್ಪನೆ.

ಮೊದಮೊದಲು ಈ ದೇವತೆಗಳನ್ನು ಸಾಮೂಹಿಕವಾಗಿ ಪೂಜಿಸಲೆಂದೆಣಿಸಿ ಅವುಗಳ ಪ್ರತೀಕಗಳನ್ನು ಅಂದರೆ ಮೂರ್ತಿಗಳನ್ನು ಶಿಲೆ, ಲೋಹ, ದಾರು (ಮರ) ಇವುಗಳಿಂದ ನಿರ್ಮಿಸಿ, ಅವಕ್ಕಾಗಿ ಕಟ್ಟಡಗಳನ್ನು ಕಟ್ಟಿಸಿ, ಆಯಾ ಮೂರ್ತಿಗಳನ್ನು ಅವುಗಳಲ್ಲಿ ಮಂತ್ರಪೂರ್ವಕವಾಗಿ ಪ್ರತಿಷ್ಠಿಸಿ, ಅವನ್ನು ಪೂಜೆಗೆ ಅರ್ಹಗಳನ್ನಾಗಿ ಮಾಡುವ ಪದ್ಧತಿ ಬಂದಿತು. ಇವೇ ದೇವಾಲಯಗಳೆನಿಸಿದುವು. ಬಳಿಕ ಆಯಾ ದೇವತೆಗಳ ಭಕ್ತರು ಈ ಮೂರ್ತಿಗಳನ್ನು ಆರಾಧನೆ ಮಾಡುವ ಕ್ರಮವೂ ಏರ್ಪಟ್ಟಿತು.

ಇಂತಹ ಮೂರ್ತಿಪೂಜೆಯ ಪದ್ಧತಿಯು ಕೃತಯುಗದಲ್ಲಿದ್ದಂತೆ ಕಂಡು ಬರುವುದಿಲ್ಲ. ತ್ರೇತಾಯುಗದಲ್ಲಿದ್ದಿತೆಂಬುದಕ್ಕೆ ಶ್ರೀಮದ್ರಾಮಾಯಣದಲ್ಲಿ ಸೂಚನೆಯಿದೆ. ದ್ವಾಪರಯುಗದಲ್ಲಿ ಈ ಪದ್ಧತಿ ಹೆಚ್ಚಿತು. ಈ ಕಲಿಯುಗದಲ್ಲಿ ಯಾದರೋ ನಮ್ಮ ಇಡೀ ಭಾರತದಲ್ಲಿ ಎಲ್ಲೆಡೆಗಳಲ್ಲಿಯೂ ದೇವಾಲಯ ಗಳೊಳಗೆ ಮೂರ್ತಿಪೂಜೆಯ ಪದ್ಧತಿಯು ಹರಡಿತು ಎಂಬುದಕ್ಕೆ ಹೇರಳವಾದ ನಿದರ್ಶನಗಳಿವೆ. ಇವುಗಳಲ್ಲಿ ಪೂಜಾರ್ಹವಾದ ಮೂರ್ತಿಗಳೆಂದರೆ ಶ್ರೀಮಹಾ-ವಿಷ್ಣುವಿನ ದಶಾವತಾರದ ಹೆಸರಿನವು. ಆದರಲ್ಲಿಯೂ ಶ್ರೀರಾಮ ಶ್ರೀಕೃಷ್ಣ ಹೆಸರಿನ ಮೂರ್ತಿಗಳನ್ನು ಆಸೇತುಹಿಮಾಚಲಪರ್ಯಂತ ಪೂಜೆಗಳವಡಿಸಿರು ವಂತಹ ದೇವಾಲಯಗಳು ಅಸಂಖ್ಯಾತ. ಅಲ್ಲದೆ ಶಿವದೇವಾಲಯಗಳೂ, ಹಿಂದೆ ಹೆಸರಿಸಿದ ಸ್ತ್ರೀದೇವತೆಯರಿಗಾಗಿ ಏರ್ಪಟ್ಟ ಗುಡಿಗಳೂ ಅನೇಕವಿವೆ. ಇದರ ಜೊತೆಗೆ ಆಯಾಯ ಪ್ರಧಾನದೇವತೆಗಳ ಭಕ್ತರೂ ಕೂಡ ಪೂಜೆಗೆ ಯೋಗ್ಯರೆಂದು ಭಾವಿಸಿ ಅವರಿಗೂ ದೇವಾಲಯಗಳಾದವು. ಉದಾಹರಣೆಗೆ ಬಸವ, ಗರುಡ, ಹನುಮಂತ ಮೊದಲಾದವರಿಗೂ ದೇವಾಲಯಗಳಿವೆ. ಇವೂ ಅಲ್ಲದೆ ಲೋಕಕಲ್ಯಾಣಕ್ಕಾಗಿ ದುಡಿದು ಮಹಾಮಹಿಮರೆನಿಸಿದ ಯೋಗಿ-ವರರಿಗೂ ಪೂಜಾಗೃಹಗಳು ಏರ್ಪಟ್ಟವೆ. ಉದಹರಿಸಬೇಕೆಂದರೆ ಶ್ರೀ ಶಂಕರ ರಾಮಾನುಜಮಧ್ವರೇ ಮೊದಲಾದ ಮತಾಚಾರ್ಯರಿಗೂ ಶ್ರೀ ಬ್ರಹ್ಮಚೈತನ್ಯ ಶ್ರೀ ಚಿದಂಬರ ಶ್ರೀ ರಾಘವೇಂದ್ರರೇ ಮೊದಲಾದ ಬೃಂದಾವನಸ್ಥ ಯತಿವರ-ರಿಗೂ ಪೂಜೆ ಸಲ್ಲುತ್ತಿರುವ ದೇವಾಲಯಗಳು ಪ್ರಸಿದ್ಧಿಗೆ ಬಂದಿವೆ. ಈ ಮೇಲಿನ ವಿವರಣೆಯು ನಿರ್ಗುಣಸ್ವರೂಪನಾದ ಪರಬ್ರಹ್ಮನ ಆರಾಧನೆಯನ್ನು ಮೂರ್ತಿಪೂಜೆಯೆಂಬ ಸಗುಣಾರಾಧನೆಯ ಮೂಲಕ ಹೇಗೆ ಸಲ್ಲಿಸಬಹುದೆಂಬ ಉದ್ದೇಶದಿಂದ ಮಾತ್ರ.

ಈ ಹಿಂದಿನವೆಲ್ಲವೂ ಸಾರ್ವಜನಿಕರ ಸಲುವಾಗಿ ಏರ್ಪಟ್ಟ ದೇವಾಲಯ ಗಳಲ್ಲಿನ ವಿಗ್ರಹಾರಾಧನೆಯ ವಿಷಯವಾಯಿತು. ಆದರೆ ವೈಯಕ್ತಿಕವಾಗಿ ಮಾನವನು ತನ್ನ ಇಷ್ಟದೇವತೆಗೆ ವೈದಿಕವಿಧಿಯಿಂದ ನಿತ್ಯಪೂಜೆಯನ್ನು ಸಲ್ಲಿಸುವ ಬಗೆ ಹೇಗೆ? ಎಂಬುದರ ವಿವರಣೆಯೇ ಈ ಗ್ರಂಥದ ಮುಖ್ಯ ಉದ್ದೇಶ. ಮಂತ್ರ, ಜಪ, ಮಾನಸಪೂಜೆ ಆಯಾ ದೇವತೆಗಳ ಪ್ರತೀಕಗಳ ಪೂಜೆ ಇವೆಲ್ಲವೂ ಸಗುಣಾರಾಧನೆಗೆ ಸಂಬಂಧಿಸಿದವು. ನಿತ್ಯಪೂಜೆಯಲ್ಲಿ

ಪಂಚಾಯತನಪೂಜೆಗೆ ಹೆಚ್ಚು ಪ್ರಾಶಸ್ತ್ಯ. ಶಿವ, ವಿಷ್ಣು, ಗಣೇಶ, ಸೂರ್ಯ ಮತ್ತು ಅಂಬಿಕೆ ಈ ಐವರನ್ನು ಒಟ್ಟು ಸೇರಿಸಿ ಅವರ ಪ್ರತೀಕಗಳನ್ನು ಮಾಡುವ ಪೂಜೆಗೆ 'ಪಂಚಾಯತನ ಪೂಜೆ' ಎಂಬ ಹೆಸರು ಬಂದಿದೆ. ಇದರಲ್ಲಿ ಶಿವ-ಪಂಚಾಯತನ, ವಿಷ್ಣುಪಂಚಾಯತನ ಮೊದಲಾದ ಐದು ಬಗೆ ಪಂಚಾಯತನ ಪೂಜೆಯ ಪದ್ಧತಿಯಿದೆ. ಪ್ರತಿಯೊಂದರಲ್ಲಿಯೂ ಈ ಐವರ ಪೂಜೆಯಿದೆ ಯಾದರೂ ಆಯಾ ದೇವತೆಗೆ ಪ್ರಧಾನ ಸ್ಥಾನವನ್ನು ಕೊಟ್ಟು ಪೂಜಿಸುವುದರಿಂದ ಆಯಾ ಹೆಸರಿನ ಪಂಚಾಯತನವೆನಿಸುತ್ತದೆ. ಇವುಗಳಲ್ಲಿ ಆಯಾ ದೇವತೆಗಳನ್ನು ಪ್ರತಿನಿಧಿಸುವ ನಿರಾಕಾರ ವಸ್ತುಗಳೂ ನಿತ್ಯಪೂಜೆಗೆ ತಕ್ಕವು ಎಂದು ಭಾವಿಸಿ, ಶಿವನಿಗೆ ಪ್ರತಿಯಾಗಿ ಬಾಣಲಿಂಗ, ವಿಷ್ಣುಸ್ಥಾನದಲ್ಲಿ ಸಾಲಿಗ್ರಾಮ, ಗಣೇಶನಿಗಾಗಿ ಶೋಣಭದ್ರಶಿಲೆ, ದೇವಿ ಅಂಬಿಕೆಯ ಪ್ರತೀಕವಾಗಿ ಅದೇ ಹೆಸರಿನ ಶಿಲೆ ಮತ್ತು ಸೂರ್ಯನನ್ನುದ್ದೇಶಿಸಿ ಸ್ಫಟಿಕಶಿಲೆ ಹೀಗೆ ವಿವಿಧ ಶಿಲೆಗಳನ್ನೇ ವಿಧಿಸಿರುತ್ತಾರೆ.

ಇವುಗಳನ್ನು ಅರ್ಚಿಸುವ ಕ್ರಮ ಈ ಗ್ರಂಥದ ಶಿರೋನಾಮೆಗೆ ಅನು-ಗುಣವಾಗಿ '**ಷೋಡಶೋಪಚಾರ**' ಅಂದರೆ ಹದಿನಾರು ಬಗೆಯಿಂದ ದೇವತಾಸೇವೆ ಎಂಬುದನ್ನು ತಿಳಿಸಿ ಅದರ ವಿವರಣೆಯನ್ನು ಈ ಮುಂದಿನಂತೆ ಕೊಟ್ಟಿದೆ. ಆವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನೀಯ, ಸ್ನಾನ (ಅಭಿಷೇಕ), ವಸ್ತ್ರ, ಉಪವೀತ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ದಕ್ಷಿಣಾಸಹಿತವಾದ ತಾಂಬೂಲ, ಮಂತ್ರಪುಷ್ಪ ಮತ್ತು ಪ್ರಾರ್ಥನಾಸಹಿತ ಪ್ರದಕ್ಷಿಣಪೂರ್ವಕ ನಮಸ್ಕಾರ, ಇವುಗಳೇ ಇಷ್ಟದೇವತೆಗೆ ಸಲ್ಲಿಸಬೇಕಾದ ಉಪಚಾರಗಳು. ಇವುಗಳಲ್ಲಿ ಒಂದೊಂದನ್ನೂ ವೇದಮಂತ್ರಪೂರ್ವಕವಾಗಿ ಸಲ್ಲಿಸಬೇಕೆಂಬುದೇ ವಿಧಿ. ಅದಕ್ಕೆ ತಕ್ಕಂತೆ ಪರಮಾತ್ಮನ ವಿರಾಟ್ ಸ್ವರೂಪ ವನ್ನು ವರ್ಣಿಸಿರುವ **ಪುರುಷಸೂಕ್ತ** ಮತ್ತು ಆ ಪರಬ್ರಹ್ಮನ ಶಕ್ತಿಸ್ವರೂಪ ವನ್ನು ವಿವರಿಸಿರುವ ಶ್ರೀಸೂಕ್ತ ಇವೆರಡರಲ್ಲಿ ಒಂದೊಂದೂ ಹದಿನಾರು ಮಂತ್ರಗಳನ್ನೊಳಗೊಂಡಿದೆಯಾದುದರಿಂದ ಮೇಲೆ ವಿವರಿಸಿರುವ ಹದಿನಾರು ಬಗೆ ಉಪಚಾರಗಳ ಒಂದೊಂದಕ್ಕೂ ಒಂದೊಂದು ಮಂತ್ರವನ್ನು ಅಳವಡಿಸಿ ಪೂಜಿಸುವ ಪದ್ಧತಿ ಇಳಿದುಬಂದಿದೆ. ಈ ಗ್ರಂಥದಲ್ಲಿ ಪುರುಷಸೂಕ್ತದ ಮಂತ್ರಗಳನ್ನು ಮಾತ್ರ ಉಪಯೋಗಿಸಿದೆ. ಇಷ್ಟವುಳ್ಳವರು ಈ ಗ್ರಂಥದಲ್ಲಿ

ಪ್ರಕಟಿಸಿರುವ ಶ್ರೀಸೂಕ್ತ ಮಂತ್ರಗಳನ್ನೂ ಕೂಡ ಅವುಗಳ ಜೊತೆಯಲ್ಲಿ ಬಳಸಬಹುದು.

ಮತ್ತೊಂದು ವಿಷಯ. ಇಷ್ಟದೇವತೆಗೆ ಅಭಿಷೇಕ ಸೇವೆಯನ್ನು ಸಲ್ಲಿಸುವಂದು ಫಲಪಂಚಾಮೃತ ಅಭಿಷೇಕದ ಜೊತೆಗೆ ಶುದ್ಧೋದಕದ ಅಭಿಷೇಕವನ್ನು ಮಾಡುವಾಗ ಪಂಚಮಹಾಸೂಕ್ತಗಳನ್ನೂ, ಲಘುನ್ಯಾಸ, ಇಲ್ಲವೆ ಮಹನ್ಯಾಸಪೂರ್ವಕವಾಗಿ ನಮಕಚಮಕದಿಂದ ಕೂಡಿದ ರುದ್ರಾಭಿಷೇಕ ಮಂತ್ರೋಚ್ಚಾರಣೆ ಮಾಡುವ ಪದ್ಧತಿ ಇದೆ. ಅದನ್ನನುಸರಿಸುವವರಿಗಾಗಿ ಪಂಚಸೂಕ್ತಗಳನ್ನು ಸಸ್ವರವಾಗಿ ಇದರಲ್ಲಿ ಮುದ್ರಿಸಿದೆಯಾದರೂ ಗ್ರಂಥ-ವಿಸ್ತಾರದ ಭಯದಿಂದ ಉಳಿದವುಗಳನ್ನು ಮುದ್ರಿಸಿಲ್ಲ. ಅಲ್ಲದೆ ನೀರಾಜನ, ಮಂತ್ರಪುಷ್ಪ, ಪ್ರಾರ್ಥನಾ ಈ ಉಪಚಾರಗಳನ್ನು ಇಷ್ಟದೇವತೆಗೆ ಅರ್ಪಿಸು ವಂದು ಪಠಿಸಬೇಕಾದ ವಿವಿಧ ಮಂತ್ರಗಳನ್ನೂ ಇದರಲ್ಲಿ ಉಲ್ಲೇಖಿಸಿದೆ. ಆರಾಧಕನು ತನಗೆ ಇಷ್ಟಬಂದ ಮಂತ್ರಗಳನ್ನು ಆರಿಸಿಕೊಳ್ಳಬಹುದು. ಇಲ್ಲವೇ ಮಂತ್ರಗಳೆಲ್ಲವನ್ನೂ ಘೋಷಿಸಬಹುದು.

ಈ ಗ್ರಂಥದ ವೈಶಿಷ್ಟ್ಯವೆಂದರೆ ಇದರಲ್ಲಿ ಅಳವಡಿಸಿರುವ ವೇದಮಂತ್ರ ಗಳೆಲ್ಲಕ್ಕೂ ಸ್ವರಗಳನ್ನು ಕೊಟ್ಟಿದೆ. ವೇದಮಂತ್ರಗಳನ್ನು ಅಭ್ಯಸಿಸದವರೂ ಕೂಡ ಷೋಡಶೋಪಚಾರ ವಿಧಿಯನ್ನು ಕ್ರಮವಾಗಿ ಅನುಸರಿಸುವ ಸಲುವಾಗಿ ಅವಕ್ಕೆ ತಕ್ಕ ಪೌರಾಣಿಕ ಶ್ಲೋಕಗಳನ್ನು ಇದರಲ್ಲಿ ಕೊಟ್ಟಿದೆ.

ಇನ್ನೊಂದು ವಿಷಯ: ಈ ಗ್ರಂಥಕ್ಕೆ '**ಶ್ರೀರಾಮಪೂಜಾವಿಧಿಃ**' ಎಂಬ ಶಿರೋನಾಮೆಯನ್ನಳವಡಿಸಿದೆಯಾಗಿ ಇಷ್ಟದೇವತೆಯನ್ನು ಹೆಸರಿಸುವಾಗ ಶ್ರೀರಾಮಚಂದ್ರದೇವನನ್ನೇ ಉಚ್ಚರಿಸಿದೆಯಾದರೂ ಆರಾಧಕನು ಈ ಹೆಸರಿನ ಸ್ಥಾನದಲ್ಲಿ ತನ್ನ ಇಷ್ಟದೇವತೆಯ ಹೆಸರನ್ನು ಹೇಳಿಕೊಳ್ಳಬಹುದು. ಶ್ರೀರಾಮಚಂದ್ರನ ಪೂಜಾವಿಧಿಗನುಗುಣವಾಗಿ '**ಶ್ರೀ–ರಾ–ಮಾ–ಯ ನ–ಮಃ**' ಎಂಬ ಮೂಲಮಂತ್ರದ ಅಕ್ಷರಗಳಿಂದ ಆರಂಭವಾದ ಅಷ್ಟೋತ್ತರ-ಶತ (೧೦೮) ನಾಮಾವಳಿಯನ್ನು ಇದರಲ್ಲಿ ಸೇರಿಸಲಾಗಿದೆ ಮತ್ತು ಪ್ರಾರ್ಥನೆ ಗಾಗಿ ಆ ಶ್ರೀರಾಮನ ಪ್ರಾರ್ಥನಾಮಾಲೆಯನ್ನು ಕೊಟ್ಟಿದೆ. ಇದಕ್ಕೆ ಪ್ರತಿಯಾಗಿ ಆರಾಧಕನು ತನ್ನ ಇಷ್ಟದೇವತೆಗೆ ತಕ್ಕ ನಾಮಾವಳಿಗಳನ್ನೂ, ಆಯಾ ದೇವತೆಗಳ ಸ್ತುತಿಮಾಲೆಯನ್ನೂ ಅವಕ್ಕಾಗಿ ಮೀಸಲಾಗಿರುವ ಬೇರೆ

ಗ್ರಂಥಗಳ ಸಹಾಯದಿಂದ ಪಡೆಯಬಹುದು. ಗ್ರಂಥವು ಹಿಗ್ಗುವುದೆಂಬ ಶಂಕೆಯಿಂದ ಅವುಗಳೆಲ್ಲವನ್ನೂ ಇದರಲ್ಲಿ ಅಳವಡಿಸಲಾಗಲಿಲ್ಲ. ಪುಸ್ತಕದ ಉಪಯೋಗವು ಉಭಯ ಶಾಖೆ (ಋಕ್ ಮತ್ತು ಯಜುಸ್) ಗಳಿಗೆ ಸೇರಿದವರಿಗೂ ಲಭಿಸಲೆಂದೆಣಿಸಿ ಆಯಾ ಮಂತ್ರಗಳಿಗೆ 'ಋಕ್' ಮತ್ತು 'ಯಜುಸ್' ಎಂಬುದನ್ನು ಕಂಸಗಳಲ್ಲಿ ಅಳವಡಿಸಿದೆ.

ಕಡೆಯದಾಗಿ ವಾಚಕರಲ್ಲಿ ಒಂದು ವಿನಂತಿ :—ಇದರಲ್ಲಿ ಅಡಕವಾಗಿರುವ ವಿವಿಧ ಭಾಗಗಳನ್ನು, ದಿವಂಗತ ಶ್ರೀ ಸಿ. ಎನ್. ಶಾಸ್ತ್ರಿಗಳವರು ಬರೆದಿಟ್ಟ ಹಸ್ತಪ್ರತಿಯನ್ನೇ ಪ್ರಧಾನವಾಗಿರಿಸಿಕೊಂಡು, ಈ ವಿಷಯದಲ್ಲಿ ಪ್ರಕಟವಾಗಿರುವ ಹಲವಾರು ಗ್ರಂಥಗಳನ್ನು ಪರಿಶೀಲಿಸಿ, ಸಂದರ್ಭಕ್ಕನುಗುಣವಾಗಿ ಅವುಗಳಲ್ಲಿರುವ ಆಯಾಶಾಖೆಯ ಮಂತ್ರಗಳನ್ನು ಆಯ್ದು ಸೇರಿಸಿ, ಬೇರೊಂದು ಮಾತೃಕೆಯನ್ನು ರಚಿಸಿ, ಮುದ್ರಣಕ್ಕೆ ಒಳಪಡಿಸಿದೆ. ಇದರಿಂದ ಈ ಲೇಖಕನು ಸಂಗ್ರಾಹಕನೇ ವಿನಾ ಸ್ವಯಂಕರ್ತನಲ್ಲ. ಮಂತ್ರಗಳಲ್ಲಿ ಸ್ವರಗಳು ಅಲ್ಲಲ್ಲಿ ವ್ಯತ್ಯಾಸವಿರಬಹುದು ಅವುಗಳನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುವುದು. ಈ ಹಿಂದೆ ಪ್ರಕಟಿಸಿದ್ದ 'ಋಗ್ಯಜುಸ್ಸಂಧ್ಯಾವಂದನೆ' ಎಂಬ ಗ್ರಂಥದಲ್ಲಿ ಮಂತ್ರಗಳಿಗೆ ಅರ್ಥ ಕೊಡಲಾಗಿತ್ತು. ಅದರಂತೆಯೇ ಈ ಗ್ರಂಥದಲ್ಲಿನ ವಿವಿಧ ಮಂತ್ರಗಳಿಗೆ ಅರ್ಥವಿವರಣೆ ಕೊಟ್ಟು, ಅವುಗಳ ಔಚಿತ್ಯವೇನೆಂಬುದನ್ನು ತಿಳಿಸಬೇಕೆಂಬ ಉದ್ದೇಶವಿದ್ದಿತು. ಆದರೆ ಇದರಿಂದ ಗ್ರಂಥವಿಸ್ತಾರವಾಗಿ ಮುದ್ರಣದ ವೆಚ್ಚ ಹೆಚ್ಚಾಗುತ್ತದೆಯಾಗಿ ಹಣದ ಮುಗ್ಗಟ್ಟಿನಿಂದ ಅರ್ಥ-ವಿವರಣೆಯನ್ನು ಈ ಮುಂದೆ ಎರಡನೇ ಭಾಗವಾಗಿಯೇ ಪ್ರಕಟಿಸುವ ಉದ್ದೇಶವಿದೆ. ಈ ವಿಷಯದಲ್ಲಿ ಆಸ್ತಿಕರ ಸಹಕಾರ ದೊರಕಿದೊಡನೆಯೇ ಆ ಭಾಗವನ್ನೂ ಹೊರತರಲಾಗುತ್ತದೆ. ಈ ಮೂಲಗ್ರಂಥದ ಪ್ರಯೋಜನವು ಆಸ್ತಿಕವರ್ಗಕ್ಕೆ ಸ್ವಲ್ಪವಾದರೂ ಆದಲ್ಲಿ ಸಂಗ್ರಾಹಕನ ಕೃತಜ್ಞತೆ ಅಂಥವರಿಗಾಗಿ ಮೀಸಲು.

ಇತಿ

ಬುರುಗನಹಳ್ಳಿ ಭೀಮಸೇನಶರ್ಮ

(B. Bhimasena Rao)



॥ ಶ್ರೀ ಗುರುಭ್ಯೋ ನಮಃ ॥

ಶ್ಲೋ॥ ಯಸ್ಯಾಂತರ್ನಾದಿಮಧ್ಯಂ * ನ ಹಿ ಕರಚರಣಂ *
ನಾಮಗೋತ್ರಂ ನ ಸೂತ್ರಮ್ ।
ನೋ ಜಾತಿಃ ನೈವ ವರ್ಣಾಃ * ನ ಭವತಿ ಪುರುಷೋ *
ನಾ ನಪುಂಸಂ ನ ಚ ಸ್ತ್ರೀ ॥
ನಾಕಾರಂ ನೋ ವಿಕಾರಂ * ನ ಹಿ ಜನಿಮರಣಂ *
ನಾಸ್ತಿ ಪುಣ್ಯಂ ನ ಪಾಪಮ್ ।
ನೋ ತತ್ವಂ ತತ್ವಮೇಕಂ * ಸಹಜಸಮರಸಂ *
ಸದ್ಗುರುಂ ತಂ ನಮಾಮಿ ॥

## ಪುರುಷಸೂಕ್ತಪೂರ್ವಕ ಇಷ್ಟದೇವತಾರ್ಚನಕ್ರಮಃ

# ಶ್ರೀರಾಮಚಂದ್ರ ಪೂಜಾವಿಧಿಃ

---

### ಪೂರ್ವಾಂಗ

ಆದೌ ಉಪಾಸಕಃ ಪರಿಶುದ್ಧಾತ್ಮಕಃ ಸನ್, ಶುದ್ಧಭಾವೇನ ಪೂಜಾ-ಸ್ಥಾನಂ ಪ್ರವಿಶ್ಯ, ಉಪಕಲ್ಪಿತಯೋಗ್ಯಪೀಠೇ ಪೂರ್ವಾಭಿಮುಖಂ ಉತ್ತರಾಭಿ-ಮುಖಂ ವಾ ಇಷ್ಟದೇವತಾಸನ್ನಿಧೌ ಉಪವಿಶ್ಯ, ಲಲಾಟೇ ಶರೀರಸ್ಯ ತತ್ತದ್ಭಾಗೇ ಚ ಸಂಪ್ರದಾಯ ಮನುಸೃತ್ಯ ಊರ್ಧ್ವಪುಂಡ್ರ-ಭಸ್ಮ-ಗೋಪೀ-ಚಂದನಾದಿಕಂ ಮಂತ್ರಪೂರ್ವಕಂ ಧೃತ್ವಾ, ಆಚಮ್ಯ, ಸಂಧ್ಯಾವಂದನ-ಮಹಾಮಂತ್ರಜಪಾದಿಕಂ ಸಾಂಗಂ ಸಮಾಪ್ಯ, ಪೂಜಾದ್ರವ್ಯಾಣಿ ಇಷ್ಟ-ದೇವತಾ ಸಮೀಪದೇಶೇ ನಿಧಾಯ, ಪುನರಾಚಮ್ಯ,

ಶ್ಲೋ॥ ನಮೋ ಬ್ರಹ್ಮಣ್ಯದೇವಾಯ * ಗೋಬ್ರಾಹ್ಮಣ-ಹಿತಾಯ ಚ।
ಜಗದ್ಧಿತಾಯ ಕೃಷ್ಣಾಯ * ಗೋವಿಂದಾಯ ನಮೋ ನಮಃ॥

ಇತಿ ಪ್ರಾರ್ಥನಾಂ ಪರಬ್ರಹ್ಮಸ್ವರೂಪಿಣೇ ಶ್ರೀಗೋವಿಂದಾಯ ಸಮರ್ಪ್ಯ, ತದುಪರಿ ಮಾತೃದೇವತಾಪಿತೃದೇವತಾಭ್ಯಾಂ ಶ್ರುತಿಮಂತ್ರಪೂರ್ವಕಂ ನಮಸ್ಕಾರಾನ್ ಅರ್ಪಯಿತವ್ಯಮ್॥

'ಯೇಭ್ಯೋ ಮಾತೇ ತ್ಯಸ್ಯ ಗಯಃ ಪ್ಲಾತಃ ವಿಶ್ವೇದೇವಾ ಜಗತೀ। ಏವಾ ಪಿತ್ರೇ ಇತ್ಯಸ್ಯ ವಾಮದೇವೋ ಬೃಹಸ್ಪತಿಃ ತ್ರಿಷ್ಟುಪ್। ಮನುಷ್ಯಗಂಧ-ನಿವಾರಣೇ ವಿನಿಯೋಗಃ॥

ಮಂತ್ರಾಃ— (ಋಕ್)

ಯೇಭ್ಯೋ ಮಾತಾ ಮಧುಮತ್ ಪಿನ್ವತೇ ಪಯಃ
ಪೀಯೂಷಂ ದ್ಯೌರದಿತಿ ರದ್ರಿ ಬರ್ಹಾಃ * ಉಕ್ಥಶುಷ್ಮಾನ್
ವೃಷಭರಾನ್ತ್ಸ್ವಪ್ನಸಸ್ತಾಁ ಆದಿತ್ಯಾಁ ಅನುಮದಾಸ್ವಸ್ತಯೇ॥

(ಋಕ್‌ಸಂಹಿತೇ, ಅಷ್ಟಕ ೮–ಅಧ್ಯಾಯ ೩–ವರ್ಗ ೨)

ಏವಾಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್ವಿಧೇಮ
ನಮಸಾಹವಿರ್ಭಿಃ * ಬೃಹಸ್ಪತೇ ಸುಪ್ರಜಾವೀರವನ್ತೋ ವಯಂ
ಸ್ಯಾಮಪತಯೋ ರಯೀಣಾಂ॥

(ಋ.ಸಂ, ಅ-೨, ಅ-೨, ವ-೭)

ಶ್ಲೋ॥ ಶುಕ್ಲಾಂಬರಧರಂ ವಿಷ್ಣುಂ * ಶಶಿವರ್ಣಂ ಚತುರ್ಭುಜಮ್।
ಪ್ರಸನ್ನವದನಂ ಧ್ಯಾಯೇತ್ * ಸರ್ವವಿಘ್ನೋಪಶಾಂತಯೇ॥

ಇತಿ ಆದೌ ಗಣಪತಿಂ ಧ್ಯಾತ್ವಾ,

ಶ್ಲೋ॥ ಅಪಸರ್ಪಂತು ತೇ ಭೂತಾಃ * ಯೇ ಭೂತಾಃ ಭುವಿ ಸಂಸ್ಥಿತಾಃ।
ಯೇ ಭೂತಾಃ ವಿಘ್ನಕರ್ತಾರಃ * ತೇ ನಶ್ಯಂತು ಶಿವಾಜ್ಞಯಾ॥

ಇತಿ ಮಂತ್ರೇಣ ಭೂತೋಚ್ಚಾಟನಂ ಕುರ್ಯಾತ್.

## ಘಂಟಾನಾದನಮ್

ಶ್ಲೋ॥ ಆಗಮಾರ್ಥಂ ತು ದೇವಾನಾಂ * ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ * ದೇವತಾಹ್ವಾನಲಕ್ಷಣಮ್ ॥

ಇತಿ ಮಂತ್ರೇಣ ಘಂಟಾನಾದಂ ಕೃತ್ವಾ,

ಶ್ಲೋ॥ ವಿಷ್ಣುಶಕ್ತಿಸಮುತ್ಪನ್ನೇ! * ಸ್ವರ್ಣವರ್ಣಮನೋಹರೇ ! ।
ಅನೇಕರತ್ನಸಂಪೂರ್ಣೇ ! * ಭೂಮಿದೇವಿ ! ನಮೋಽಸ್ತು ತೇ ॥

ಇತಿ ಮಂತ್ರೇಣ ಭೂಮಿಂ ಪ್ರಾರ್ಥ್ಯ,

ಆಚಮ್ಯ, ಪ್ರಾಣಾನಾಯಮ್ಯ, ಅನಂತರಂ ಸಂಕಲ್ಪ್ಯ,

## ಸಂಕಲ್ಪ

ಪೃಥಿವ್ಯಾಃ, ಮೇರೋಪೃಷ್ಠಋಷಿಃ, ಕೂರ್ಮೋ ದೇವತಾ, ಸುತಲಂ ಛಂದಃ, ಆಸನಪ್ರಾಣಾಯಾಮೇ ವಿನಿಯೋಗಃ ([ಅಥವಾ] ಪ್ರಣವಸ್ಯ ಪರಬ್ರಹ್ಮಋಷಿಃ, ಪರಮಾತ್ಮಾ ದೇವತಾ, ದೈವೀ ಗಾಯತ್ರೀ ಛಂದಃ, ಪ್ರಾಣಾಯಾಮೇ ವಿನಿಯೋಗಃ)

ಮಂತ್ರಾಃ— ಓಂ ಭೂಃ * ಓಂ ಭುವಃ * ಓಂ ಸುವಃ (ಸ್ವಃ) * ಓಂ ಮಹಃ *

ಓಂ ಜನಃ * ಓಂ ತಪಃ * ಓಂ (ಗ್ಂ) ಸತ್ಯಂ * ಓಂ ತತ್ಸವಿತ್ರುವರೇಣ್ಯಂ *

ಭರ್ಗೋ ದೇವಸ್ಯ ಧೀಮಹಿ * ಧಿಯೋ ಯೋ ನಃ ಪ್ರಚೋದಯಾತ್ *

ಓಮಾಪೋ ಜ್ಯೋತೀ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸ್ವರೋಂ *

ಇತಿ ಪ್ರಾಣಾನಾಯಮ್ಯ,

ಶುಭೇ ಶೋಭನೇ ಮುಹೂರ್ತೇ, ವೈವಸ್ವತ ಮನ್ವಂತರೇ, ಕಲಿಯುಗೇ, ಪ್ರಥಮಪಾದೇ, ಜಂಬೂದ್ವೀಪೇ, ಭಾರತವರ್ಷೇ, ಭರತಖಂಡೇ, ದಂಡ-ಕಾರಣ್ಯೇ, ಗೋದಾವರ್ಯಾಃ ದಕ್ಷಿಣೇತೀರೇ, ಶಾಲೀವಾಹನಶಕೇ, ಬೌದ್ಧಾವ-ತಾರೇ, ರಾಮಕ್ಷೇತ್ರೇ, ಅಸ್ಮಿನ್ ವರ್ತಮಾನೇ, ಪ್ರಭವಾದಿ ಷಷ್ಠಿ-ಸಂವತ್ಸರಾಣಾಂ ಮಧ್ಯೇ........ಸಂವತ್ಸರೇ....ಅಯನೇ....ಋತೌ....ಮಾಸೇ ....ಪಕ್ಷೇ....ಶುಭತಿಥೌ, ವಾಸರಸ್ತು....ವಾಸರಯುಕ್ತಾಯಾಂ ಶುಭನಕ್ಷತ್ರ-ಶುಭಯೋಗ–ಶುಭಕರಣ–ಏವಂ ಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ, ಅಸ್ಯ ದೇವಸ್ಯ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕಸ್ಯ (ಇಷ್ಟ-ದೇವತಾಮುದ್ದಿಶ್ಯ) ಶ್ರೀ ಸೀತಾ-ಲಕ್ಷ್ಮಣ-ಭರತ-ಶತ್ರುಘ್ನ-ಹನೂಮತ್ಸಮೇತ ಶ್ರೀರಾಮಚಂದ್ರಪರಬ್ರಹ್ಮಸ್ವರೂಪೀ ದೇವತಾಮುದ್ದಿಶ್ಯ, ತದ್ದೇವತಾ-ಪ್ರೀತ್ಯರ್ಥಂ, ಅಸ್ಮಾಕಂ ಸಹ ಕುಟುಂಬಾನಾಂ ಕ್ಷೇಮ-ಸ್ಥೈರ್ಯ-ವಿಜಯ-ವೀರ್ಯಾಯುರಾರೋಗ್ಯಾದಿ-ಸಿದ್ಧ್ಯರ್ಥಂ, ಮಮ ಇಹ ಜನ್ಮನಿ ಜನ್ಮ-ಜನ್ಮೇಷು, ಬಾಲ್ಯಯೌವನವಾರ್ಧಕ್ಯಾದ್ಯವಸ್ಥಾಸು, ಜ್ಞಾನತೋ ವಾ ಅಜ್ಞಾನತೋ ವಾ ಮನೋವಾಕ್ಕಾಯಕರ್ಮಭಿಃ ಕೃತಸರ್ವಪಾಪನಿವೃತ್ಯರ್ಥಂ, ಮಮೋಪಾತ್ತದುರಿತಕ್ಷಯಾರ್ಥಂ ದುಷ್ಕರ್ಮರೂಪತ್ವೇನ-ಪ್ರಾಪ್ತ-ದುಃಖ-ರೂಪಕ-ಸಂಭವಿತ, ಪಾಪನಿವೃತ್ತಿದ್ವಾರಾ, ಧರ್ಮಾರ್ಥಕಾಮಮೋಕ್ಷ-ಚತುರ್ವಿಧಪುರುಷಾರ್ಥಫಲಸಿದ್ಧ್ಯರ್ಥಂ, ಭಕ್ತಿ-ಜ್ಞಾನ-ವೈರಾಗ್ಯ-ಫಲಾ-ವಾಪ್ತ್ಯರ್ಥಂ, ನಿರಂತರಂ ಶ್ರೀರಾಮಚಂದ್ರಪಾದಾರವಿಂದಯೋಃ ಮಯಾ ಸಮಾಚರಿತ, ಶ್ರೀರಾಮಚಂದ್ರಸ್ವಾಮಿಪೂಜಾಂಗೇ, ಯಥಾ ಸಂಭವಿತಾ ನಿಯಮೇನ ಯಥಾ ಸಂಭವದ್ಭಿಃ ಉಪಚಾರೈಃ ಶ್ರೀರಾಮಚಂದ್ರಸ್ವಾಮಿನಃ ಕಲ್ಪೋಕ್ತಪ್ರಕಾರೇಣ ಪುರುಷಸೂಕ್ತಮಂತ್ರಪೂರ್ವಕಂ ಧ್ಯಾನಾವಾಹ-ನಾದಿ ಷೋಡಶೋಪಚಾರ-ಪೂಜಾಂ ಚ ಕರಿಷ್ಯೇ ॥

ತದಾದೌ ಗಣಪತಿಪೂಜಾಂ ಚ ಕರಿಷ್ಯೇ ॥

## ಗಣಪತಿ ಪೂಜಾ

ಶ್ಲೋ॥ ಸುಮುಖಶ್ಚೈಕದಂತಶ್ಚ * ಕಪಿಲೋ ಗಜಕರ್ಣಿಕಃ ।
ಲಂಬೋದರಶ್ಚ ವಿಕಟೋ * ವಿಘ್ನರಾಜೋ ಗಣಾಧಿಪಃ ॥

ಧೂಮಕೇತುಃ ಗಣಾಧ್ಯಕ್ಷಃ * ಫಾಲಚಂದ್ರೋ ಗಜಾನನಃ |
ದ್ವಾದಶೈತಾನಿ ನಾಮಾನಿ * ಯಃ ಪಠೇತ್ ಶ್ರುಣುಯಾದಪಿ ||

ವಿದ್ಯಾರಂಭೇ ವಿವಾಹೇ ಚ * ಪ್ರವೇಶೇ ನಿರ್ಗಮೇ ತಥಾ |
ಸಂಗ್ರಾಮೇ ಸರ್ವಕಾರ್ಯೇಷು * ವಿಘ್ನಸ್ತಸ್ಯ ನ ಜಾಯತೇ ||

ಶುಕ್ಲಾಂಬರಧರಂ ವಿಷ್ಣುಂ * ಶಶಿವರ್ಣಂ ಚತುರ್ಭುಜಮ್ |
ಪ್ರಸನ್ನವದನಂ ಧ್ಯಾಯೇತ್ * ಸರ್ವವಿಘ್ನೋಪಶಾಂತಯೇ ||

ಅಭೀಪ್ಸಿತಾರ್ಥಸಿದ್ಧ್ಯರ್ಥಂ * ಪೂಜಿತೋ ಯಃ ಸುರೈರಪಿ |
ಸರ್ವವಿಘ್ನಚ್ಛಿದೇ ತಸ್ಮೈ * ಗಣಾಧಿಪತಯೇ ನಮಃ ||

(ಋಕ್) ಗಣಾನಾಂ ತ್ವಾ ಗೃತ್ಸಮದೋ ಗಣಪತಿ ರ್ಜಗತೀ | ಗಣಪತ್ಯಾವಾಹನೇ ವಿನಿಯೋಗಃ ||

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಮ್ * ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ||

ಅಸ್ಮಿನ್ ಬಿಂಬೇ ಭೂಃ – ಗಣಪತಿಮಾವಾಹಯಾಮಿ | ಭುವಃ – ಗಣಪತಿಮಾವಾಹಯಾಮಿ | ಸ್ವಃ–ಗಣಪತಿಮಾವಾಹಯಾಮಿ | ಶ್ರೀಮಹಾಗಣಪತಿಂ ಧ್ಯಾಯಾಮಿ | ಮಹಾಗಣಪತಿಂ ಆವಾಹಯಾಮಿ | ಮಹಾಗಣಪತಯೇ ನಮಃ–ಆಸನಂ ಕಲ್ಪಯಾಮಿ | ಮಹಾಗಣಪತಯೇ ನಮಃ–ಪಾದಾರವಿಂದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ | ಹಸ್ತೇ–ಅರ್ಘ್ಯಂ ಅರ್ಘ್ಯಂ ಸಮರ್ಪಯಾಮಿ | ಮುಖೇ–ಆಚಮನೀಯಂ ಆಚಮನೀಯಂ ಸಮರ್ಪಯಾಮಿ | ಮಲಾಪಕರ್ಷಣಾರ್ಥಂ–ಶುದ್ಧೋದಕೇನ ಸ್ನಪಯಾಮಿ |

ಆಪೋ ಹಿಷ್ಠಾ ಮಯೋ ಭುವಃ । ತಾ ನ ಊರ್ಜೇ ದಧಾತನ *
ಮಹೇ ರಣಾಯ ಚಕ್ಷಸೇ * ಯೋ ವಃ ಶಿವತಮೋ ರಸಃ * ತಸ್ಯ ಭಾಜಯತೇಹ
ನಃ * ಉಶತೀರಿವ ಮಾತರಃ * ತಸ್ಮಾ ಅರಂ ಗಮಾಮ ವೋ * ಯಸ್ಯ
ಕ್ಷಯಾಯ ಜಿನ್ವಥ * ಆಪೋ ಜನಯಥಾ ಚ ನಃ ।

ಮಹಾಗಣಪತಯೇ ನಮಃ—ವಸ್ತ್ರಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ತದನಂತರಂ ಆಚಮನಂ ಸಮರ್ಪಯಾಮಿ । ತತಃ ಆಭರಣಾನಿ ಸಮರ್ಪಯಾಮಿ ॥ ಗಂಧಾನ್ ಸಮರ್ಪಯಾಮಿ । ಅಕ್ಷತಾನ್ ಸಮರ್ಪಯಾಮಿ । ಪುಷ್ಪಾಣಿ ಸಮರ್ಪಯಾಮಿ ॥

ಅಥ ನಾಮಪೂಜಾಂ ಚ ಕರಿಷ್ಯೇ ॥

ಓಂ ಸುಮುಖಾಯ ನಮಃ । ಓಂ ಏಕದಂತಾಯ ನಮಃ । ಓಂ ಕಪಿಲಾಯ ನಮಃ । ಓಂ ಗಜಕರ್ಣಿಕಾಯ ನಮಃ । ಓಂ ಲಂಬೋದರಾಯ ನಮಃ । ಓಂ ವಿಕಟಾಯ ನಮಃ । ಓಂ ವಿಘ್ನರಾಜಾಯ ನಮಃ । ಓಂ ಗಣಾಧಿಪಾಯ ನಮಃ । ಓಂ ಧೂಮ್ರಕೇತವೇ ನಮಃ । ಓಂ ಗಣಾಧ್ಯಕ್ಷಾಯ ನಮಃ ।ಓಂ ಫಾಲಚಂದ್ರಾಯ ನಮಃ । ಓಂ ಗಜಾನನಾಯ ನಮಃ । ಓಂ ಸರ್ವಸಿದ್ಧಿಪ್ರದಾಯಕಾಯ ನಮಃ । ಮಹಾಗಣಪತಯೇ ನಮಃ—ಇತಿ ನಾಮಪೂಜಾಂ ಸಮರ್ಪಯಾಮಿ । ಮಹಾಗಣಪತಯೇ ನಮಃ—ಧೂಪಂ ಆಘ್ರಾಪಯಾಮಿ। ದೀಪಂ ದರ್ಶಯಾಮಿ। ಧೂಪದೀಪಾನ್ತೇ ಆಚಮನೀಯಂ ಸಮರ್ಪಯಾಮಿ । (ಅಥ ನೈವೇದ್ಯಂ)—ವಿಶ್ವಾಮಿತ್ರಋಷಿಃ, ಸವಿತಾ ದೇವತಾ, ಗಾಯಿತ್ರೀಛಂದಃ। ನಿವೇದನೇ ವಿನಿಯೋಗಃ॥ ಮಹಾಗಣಪತಯೇ ನಮಃ—ಯಥಾ ಸಂಭವನ್ನೈವೇದ್ಯಂ ನಿರೀಕ್ಷಸ್ವ ॥

ಶ್ರುತಿ॥ ದೇವಸ್ಯತ್ವಾ ಸವಿತುಃ ಪ್ರಸವೇಽಶ್ವಿನೋಃ ಬಾಹುಭ್ಯಾಂ ಪೂಷ್ಣೋ

ಹಸ್ತಾಭ್ಯಾಂ ॥ ಇತಿ ನೈವೇದ್ಯಂ ನಿವೇದಯಾಮಿ ॥

ಶ್ಲೋ॥ ಘಂಟಾಕರ್ಣ-ವಿರೂಪಾಕ್ಷ- * ಕುಂಭೋದರ ಮಹೋದರಾಃ ।
ವಿಘ್ನೇಶ್ವರ-ಪ್ರಸಾದಂ ಚ * ಸರ್ವೇ ಗೃಹ್ಣಂತು ವೈಘ್ನಕಾಃ ॥

ಬಲಿಹರಣಂ ವಿಸರ್ಜಯಾಮಿ ॥ ಶ್ರೀಮಹಾಗಣಪತಯೇ ನಮಃ– ಪೂಗೀಫಲ-ತಾಂಬೂಲಂ ನಿವೇದಯಾಮಿ ॥ ಶ್ರೀಮಹಾಗಣಪತಯೇ ನಮಃ–ಮಂಗಳ ನೀರಾಜನಂ ದರ್ಶಯಾಮಿ ॥

ಅಥ ಮಂತ್ರಪುಷ್ಪಂ ಸಮರ್ಪಯಾಮಿ । ಪ್ರದಕ್ಷಿಣಂ ಕರೋಮಿ ॥

ಶ್ಲೋ॥ ನಮಸ್ಕರೋಮಿ ವಿಘ್ನೇಶ! * ಸರ್ವವಿಘ್ನಹರೋ ಭವ ।
ಶೀಘ್ರಂ ಮಮ ವರಂ ದೇಹಿ * ಪರತ್ರ ಚ ಪರಾಂ ಗತಿಮ್ ॥

ಶ್ರೀ ಮಹಾಗಣಪತಯೇ ನಮಃ–ಇತಿ ಪ್ರಾರ್ಥಯಾಮಿ । ನಮಸ್ಕರೋಮಿ ॥

ಶ್ರುತಿ ॥ ಏಕದಂತಾಯ ವಿದ್ಮಹೇ * ವಕ್ರತುಂಡಾಯ ಧೀಮಹಿ । ತನ್ನೋ ದಂತಿಃ ಪ್ರಚೋದಯಾತ್ ॥ ಶ್ರೀ ಮಹಾಗಣಪತಯೇ ನಮಃ— ಇದಮರ್ಘ್ಯಂ ॥ ಇತಿ ಪ್ರಸನ್ನಾರ್ಘ್ಯಂ ಸಮರ್ಪಯಾಮಿ ॥

ಶ್ಲೋ॥ ವಕ್ರತುಂಡ! ಮಹಾಕಾಯ! * ಕೋಟಿಸೂರ್ಯಸಮಪ್ರಭ! ।
ಅವಿಘ್ನಂ ಕುರು ಮೇ ದೇವ! * ಸರ್ವಕಾರ್ಯೇಷು ಸರ್ವದಾ ॥

ಸುರಾಸುರಶಿರೋರತ್ನ- * ಮರೀಚಿಖಚಿತಾಂಘ್ರಯೇ ।
ವಿಘ್ನಾಂಧಕಾರ-ರವಯೇ * ವಿಘ್ನೇಶಾಯ ನಮೋ ನಮಃ ॥

ಶ್ರೀಮಹಾಗಣಪತಯೇ ನಮಃ–ಪ್ರಾರ್ಥಯಾಮಿ ॥ ಅನಯಾ ಪೂಜಯಾ ಚ ಭಗವಾನ್ ಶ್ರೀಮಹಾಗಣೇಶ್ವರಃ ಪ್ರೀಣಾತು॥

## ಕಲಶಪೂಜಾ

ಕಲಶಂ ಗಂಧಪುಷ್ಪಾಕ್ಷತೈಃ ಅಭ್ಯರ್ಚ್ಯ

ಶ್ಲೋ|| ಕಲಶಸ್ಯ ಮುಖೇ ವಿಷ್ಣುಃ * ಕಂಠೇ ರುದ್ರಃ ಸಮಾಶ್ರಿತಾಃ |
ಮೂಲೇ ತತ್ರಸ್ಥಿತೋ ಬ್ರಹ್ಮಾ * ಮಧ್ಯೇ ಮಾತೃಗಣಾಃ ಸ್ಮೃತಾಃ||

ಕುಕ್ಷೌ ತು ಸಾಗರಾಃ ಸರ್ವೇ * ಸಪ್ತದ್ವೀಪಾ ವಸುಂಧರಾ|
ಋಗ್ವೇದೋಽಥ ಯಜುರ್ವೇದಃ * ಸಾಮವೇದೋಽ ಹ್ಯಥರ್ವಣಃ ||

ಅಂಗೈಶ್ಚ ಸಹಿತಾಃ ಸರ್ವೇ * ಕಲಶಾಂಬು-ಸಮಾಶ್ರಿತಾಃ |
ಅತ್ರ ಗಾಯತ್ರೀ ಸಾವಿತ್ರೀ * ಶಾಂತಿಃ ಪುಷ್ಟಿಕರೀ ತಥಾ |
ಆಯಾಂತು ದೇವಪೂಜಾರ್ಥಂ * ದುರಿತಕ್ಷಯಕಾರಕಾಃ ||

ಗಂಗೇ ಚ ಯಮುನೇ ಚೈವ * ಗೋದಾವರಿ! ಸರಸ್ವತಿ!
ನರ್ಮದೇ! ಸಿಂಧೋ! ಕಾವೇರಿ! * ಜಲೇಽಸ್ಮಿನ್ ಸನ್ನಿಧಿಂ ಕುರು ||

**ಆವಾಹನಮಂತ್ರಾಃ**— "ಓಂ ಇಮಂ ಮೇ ಗಂಗೇ ಯಮುನೇ
ಸರಸ್ವತಿ ಶುತುದ್ರಿ ಸೋಮಂ(ಗ್ಂ)ಸ ಚ ತಾಪರುಷ್ಣ್ಯಾ| ಅಸಿಕ್ನ್ಯಾ
ಮರುದ್ವೃಧೇ ವಿತಸ್ತಯಾರ್ಜೀಕೀಯೇ| ಶೃಣುಹ್ಯಾಸುಷೋಮಯಾ ||

(ಋ. ಸಂ., ಅ-೮, ಅ-೩, ವ-೬)
(ತೈ. ಆ-ಪ್ರಪಾ ೧೦-೬-೧)

(ಋಕ್)
ಸಿತಾ ಸಿತೇ ಸರಿತೇ ಯತ್ರ ಸಂಗತೇ ತತ್ರಾಪ್ಲುತಾಸೋದಿವಮುತ್ಪತಂತಿ *
ಏವೈತನ್ವಾ ೧ ವಿಸೃಜಂತಿ ಧೀರಾಸ್ತೇ ಜನಾಸೋ ಅಮೃತತ್ವಂ ಭಜಂತೇ ||
ಯಾಃ ಪ್ರವತೋ ನಿವತ ಉದ್ವತ ಉದನ್ವತೀರನುದಕಾಶ್ಚ ಯಾಃ * ತಾ

ಅಸ್ಮಭ್ಯಂ ಪಯಸಾ ಪಿನ್ವಮಾನಾಃ * ಶಿವಾದೇವೀರಶಿಪದಾಭವಸ್ತು

ಸರ್ವಾನದ್ಯೋ ಅಶಿಮಿದಾ ಭವಂತು ||

(ಯಜುಸ್) ಆಪೋವಾ ಇದಗ್ಂ ಸರ್ವಂ ವಿಶ್ವಾಭೂತಾನ್ಯಾಪಃ| ಪ್ರಾಣಾ ಆಪಃ, ಪಶವ ಆಪಃ, ಅನ್ನಮಾಪಃ, ಸಂರಾಡಾಪೋ ವಿರಾಡಾಪೋ, ಸ್ವರಾಡಾಪೋ, ಜ್ಯೋತೀಗ್ಂಷ್ಯಾಪೋ, ಯಜೂಗ್ಂಷ್ಯಾಪಃ, ಸತ್ಯರೂಪಃ, ಸರ್ವಾ ದೇವತಾ ಆಪಃ| ಓಂ ಭೂರ್ಭುವಸ್ಸ್ವರಾಪಃ ಓಮ್"

ಶ್ಲೋ|| ಸಿತಮಕರನಿಷಣ್ಣಾಂ * ಶುಭ್ರವರ್ಣಾಂ ತ್ರಿಣೇತ್ರಾಮ್ |
ಕರಧೃತಕಲಶೋದ್ಯತ್ * ಪಂಕಜಾಭೀತ್ಯಭೀಷ್ಟಾಮ್ ||
ವಿಧಿಹರಿಹರರೂಪಾಂ * ಸೇಂದುಕೋಟೀರಜೂಡಾಮ್ |
ಭಸಿತಸಿತದುಕೂಲಾಂ * ಜಾಹ್ನವೀಂ ತಾಂ ನಮಾಮಿ ||

ಇತಿ ಮಂತ್ರೇಣ ಅಸ್ಮಿನ್ ಕಲಶೇ ಸರ್ವತೀರ್ಥಾಣ್ಯಾವಾಹ್ಯ, ಕಲಶೋದಕೇನ ಪೂಜಾದ್ರವ್ಯಾಣಿ ಸಂಪ್ರೋಕ್ಷ್ಯ, ಧೇನುಮುದ್ರಾಂ ಪ್ರದರ್ಶ್ಯ, ಅಥ ಶಂಖಪೂಜಾಂ ಕರಿಷ್ಯೇ| ಶಂಖಂ ಪ್ರಕ್ಷಾಳ್ಯ, ಕಲಶೋದಕೇನ ಶಂಖಂ ಪುನಃ ಆಪೂರ್ಯ, ಶಂಖಂ ಗಂಧಪುಷ್ಪಾಕ್ಷತೈಃ ಅಭ್ಯರ್ಚ್ಯ, ಶಂಖಶೀರ್ಷೇ ಬ್ರಹ್ಮಾಣಮಾವಾಹಯಾಮಿ| ಶಂಖೇ ಆದಿತ್ಯಂ ಆವಾಹಯಾಮಿ| ಇತಿ ಆವಾಹಯಿತ್ವಾ, ಶಂಖಂ ಪ್ರಾರ್ಥಯೇತ್.

## ಶಂಖಪ್ರಾರ್ಥನಾ

ಶ್ಲೋ|| ಶಂಖಾದೌ ಚಂದ್ರದೈವತ್ಯಂ * ಕುಕ್ಷೌ ವರುಣದೇವತಾ |
ಪೃಷ್ಠೇ ಪ್ರಜಾಪತಿ ಸ್ತತ್ರ * ಅಗ್ರೇ ಗಂಗಾ ಸರಸ್ವತೀ ||
ಶಂಖೇ ತಿಷ್ಠಂತಿ ವಿಪ್ರೇಂದ್ರಾಃ*ತಸ್ಮಾತ್ ಶಂಖಂ ಪ್ರಪೂಜಯೇತ್|
ತ್ವಂ ಪುರಾ ಸಾಗರೋತ್ಪನ್ನಃ * ವಿಷ್ಣುನಾ ವಿಧೃತಃ ಕರೇ ||

